KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಜುಲೈ ೨೮, ೨೦೧೧, (ಶ್ರಾವಣ ೬, ಶಕ ವರ್ಷ ೧೯೩೩) | ಸಂಚಿಕೆ ೩೦ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಹಕಾರ ಸಚಿವಾಲಯ

**ವಿಷಯ :** ಶಿವಮೊಗ್ಗ ದೇಶೀಯ ವಿದ್ಯಾಶಾಲೆ ಸಮಿತಿ (ರಿ) ಈ ಸಂಸ್ಥೆಗೆ ನೇಮಿಸಿರುವ ಆಡಳಿತಾಧಿಕಾರಿಗಳ ಅವದಿಯನ್ನು ವಿಸ್ತರಿಸುವ ಬಗ್ಗೆ.–

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಇ 17 ಮುನೋಸೋ 2006, ದಿನಾಂಕ 24–2–2007
2) ಸರ್ಕಾರಿ ಅದೇಶ ಸಂಖ್ಯೆ: ಸಇ 123 ಸಸಂನೋ 2009, ದಿನಾಂಕ 26–7–2010
3) ಸರ್ಕಾರಿ ಅದೇಶ ಸಂಖ್ಯೆ: ಸಇ 123 ಸಸಂನೋ 2009, ದಿನಾಂಕ 20–1–2011
4) ಆಡಳಿತಾಧಿಕಾರಿಗಳು, ಶಿವಮೊಗ್ಗ ದೇಶೀಯ ವಿದ್ಯಾಶಾಲೆ ಸಮಿತಿ (ರಿ) ಇವರ ಪತ್ರ ಸಂಖ್ಯೆ: ಡಿವಿಎಸ್/ಎಡಿಎಂ/ಸಿಆರ್/1/06–07, ದಿನಾಂಕ 22–02–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರಿಂದ (3)ರ ಆದೇಶಗಳಲ್ಲಿ, ಶಿವಮೊಗ್ಗ ದೇಶೀಯ ವಿದ್ಯಾಶಾಲೆ ಸಮಿತಿ (ರಿ) ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ, ಹಿರಿಯ ಉಪವಿಭಾಗ ಅಧಿಕಾರಿ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರನ್ನು ದಿನಾಂಕ 4–1–2011 ರವರೆಗೆ ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ದಿನಾಂಕ 22–2–2011ರ ಪತ್ರದಲ್ಲಿ, ಸರ್ಕಾರವು ಡಿ.ವಿ.ಎಸ್. ಸಮಿತಿಯ ಕಾರ್ಯಕಾರಿ ಸಮಿತಿಯನ್ನು ವಜಾ ಮಾಡಿ ತನ್ನ ಹಸ್ತಕ್ಕೆ ತೆಗೆದುಕೊಂಡು, ಆಡಳಿತಾಧಿಕಾರಿಯನ್ನು ನೇಮಿಸುವಾಗ ಈ ಸಂಸ್ಥೆಯಲ್ಲಿನ ಅವ್ಯವಹಾರಗಳ ಬಗ್ಗೆ ತನಿಖೆ ತಡೆಸಿ, ಸರಿಪಡಿಸಿ ಕಾರ್ಯಕಾರಿ ಸಮಿತಿಗೆ ಚುನಾವಣೆ ನಡೆಸಿ, ಸದರಿ ನೂತನ ಆಡಳಿತವನ್ನು ವಹಿಸಕೊಡುವಂತೆ ನಿರ್ದೇಶಿಸಿದ ಮೇರೆಗೆ ಸಂಸ್ಥೆಯ ಆಡಿಟ್ ಪ್ರಕ್ರಿಯೆ ಆರಂಭವಾಗಿ ಪೂರ್ಣಗೊಂಡು ಆ ವರದಿಯ ಅನುಸಾರ ಹಿಂದಿನ ಆಡಳಿತಾಧಿಕಾರಿಗಳು ಕ್ರಮ ಕೈಗೊಂಡರು. ಇದಕ್ಕೆ ಸಂಬಂಧಪಟ್ಟಂತೆ ಶ್ರೀ ಎಸ್. ರಂಗನಾಥಯ್ಯ, ಪ್ರಾಂಶುಪಾಲರು, ಡಿವಿಎಸ್ ಸಂಯುಕ್ತ ಪದವಿಪೂರ್ವ ಕಾಲೇಜು, ಶಿವಮೊಗ್ಗ, ಶ್ರೀ ಬಿ. ಸತ್ಯನಾರಾಯಣಮೂರ್ತಿ, ಉಪ ಪ್ರಾಚಾರ್ಯರು (ಪ್ರಸ್ತುತ ನಿವೃತ್ತ) ಡಿವಿಎಸ್ ಸಂಯುಕ್ತ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ), ಶಿವಮೊಗ್ಗ, ಶ್ರೀಮತಿ ಎಂ. ಪಿ. ಸುಧಾಮಣಿ, ಪ್ರಾಂಶುಪಾಲರು, ಡಿವಿಎಸ್ ಪಾಲಿಟೆಕ್ನಿಕ್, ಶಿವಮೊಗ್ಗ ಮತ್ತು ಶ್ರೀ ಸಕ್ರ್ಯಾನಾಯ್ಕ, ಪ್ರಾಂಶುಪಾಲರು, ಡಿವಿಎಸ್ ಸಂಯುಕ್ತ ಪದವಿಪೂರ್ವ ಕಾಲೇಜು, ವಿನೋಭಾನಗರ, ಶಿವಮೊಗ್ಗ ಇವರುಗಳ ಮೇಲಿನ ಆಪಾದನೆಗಳನ್ನು ಕುರಿತು ಪ್ರಸ್ತಕ್ತ ಆಡಳಿತಾಧಿಕಾರಿಗಳು ಕ್ರಮ ಕೈಗೊಂಡು ಸದರಿ ಆಪಾದಿತ ನೌಕರರ ಆಂತರಿಕ ವಿಚಾರಣೆಗಳು ಮುಗಿದಿರುತ್ತದೆ. ತತ್ಸಂಬಂಧ ವಿಚಾರಣಾ ವರದಿಯು ಇನ್ನು ಸಲ್ಲಿಕೆಯಾಗಿರುವುದಿಲ್ಲ.

ಈ ಹಂತದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಇ 91 ಸಸಂನೋ 2009 ದಿನಾಂಕ 2–2–2011ನ್ನು ಹೊರಡಿಸಿ ಶ್ರೀ ಹನುಮನರಸಯ್ಯ, ಉಪ ಕಾರ್ಯದರ್ಶಿ–2, ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರು ವಿಚಾರಣಾ ಪ್ರಕ್ರಿಯೆ ನಡೆಸಲು ವಿಳಂಬ ಮಾಡುತ್ತಿರುವರೆಂದೂ, ಈ ಹಿನ್ನೆಲೆಯಲ್ಲಿ ಇವರ ಬದಲಾಗಿ ಸಹಕಾರ ಸಂಘಗಳ ಜಂಟಿ ನಿರ್ದೇಶಕರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ ಎಂದು ತಿಳಿಸಿ ಸದರಿ ವಿಚಾರಣಾಧಿಕಾರಿಗಳು ಸಂಸ್ಥೆಯಲ್ಲಿನ ಲೋಪಗಳ ಬಗ್ಗೆ ಹದಿನೈದು ದಿನಗಳಲ್ಲಿ ವಿಚಾರಣೆ ನಡೆಸಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲು ಕ್ರಮವಹಿಸುವಂತೆ

ತಿಳಿಸಿ ಪತ್ರ ಬರೆಯಲಾಗಿದ್ದು, ಸದರಿ ಪತ್ರವು ಆಡಳಿತಾಧಿಕಾರಿಗಳ ಕಛೇರಿಗೆ ದಿನಾಂಕ 18–2–2011 ರಂದು ತಲುಪಿರುತ್ತದೆ. ಆ ಪರಿಣಾಮವಾಗಿ ಆಂತರಿಕ ವಿಚಾರಣೆಯು ಪೂರ್ಣಗೊಂಡು ವರದಿಯು ಆಡಳಿತ ಕಛೇರಿಗೆ ಬಂಧು ತಲುಪಲು ಇನ್ನೂ ಸ್ವಲ್ಪ ಕಾಲ ಬೇಕಾಗುತ್ತದೆ. ಈ ಸಂಬಂಧ ಹೊಸ ಪ್ರಕ್ರಿಯೆ ಶುರುವಾಗಬೇಕಾಗಿದೆ.

ಹೀಗೆ ದಿನಾಂಕ 7–3–2010ರಲ್ಲಿ ಚುನಾವಣೆಗಳನ್ನು ನಡೆಸಲಾಗದ್ದಕ್ಕೆ ಕಾರಣಗಳು ಹೇಗೆ ಆಡಳಿತಾಧಿಕಾರಿಗಳ ಕೈ ಮೀರಿದವುಗಳಾಗಿದ್ದವೋ ಹಾಗೆಯೇ ಈಗಲೂ ಕೂಡ ಚುನಾವಣೆಯನ್ನು ನಡೆಸಲು ಇರುವ ಅಡ್ಡಿ ಆತಂಕಗಳನ್ನು ಪರಿಹರಿಸುವುದು ಕೈಮೀರಿದ್ದಾಗಿದೆ. ಆದ್ದರಿಂದ, ಸರ್ಕಾರವು ಕರ್ನಾಟಕ ಸಂಘಗಳ ನೊಂದಣಿ ಕಾಯ್ದೆ 1960ರ ಸೆಕ್ಷನ್ 27 (ಎ)(2) ಮತ್ತು (5)ರ ಪ್ರಕಾರ ಆಡಳಿತಾಧಿಕಾರಿಗಳ ಅಧಿಕಾರಾವಧಿಯ ಬಗ್ಗೆ ಸೂಕ್ತ ಕ್ರಮವನ್ನು ಕೈಗೊಳ್ಳುವಂತೆ ಕೋರಿರುತ್ತಾರೆ.

ಆಡಳಿತಾಧಿಕಾರಿಯವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 123 ಸಸಂನೋ 2009, ಬೆಂಗಳೂರು, ದಿನಾಂಕ : 8–4–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ದೇಶೀಯ ವಿದ್ಯಾ ಶಾಲಾ ಸಮಿತಿ (ರಿ) ಶಿವಮೊಗ್ಗ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆಡಳಿತಾಧಿಕಾರಿಯಾಗಿ ನೇಮಕವಾಗಿರುವ ಉಪ ವಿಭಾಗಾಧಿಕಾರಿಗಳು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ಇವರ ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ 5–1–2011 ರಿಂದ 30–4–2011ರ ವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ ಕಡ್ಡಾಯವಾಗಿ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಸಹ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ನಂಜುಂಡಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರಿ ಇಲಾಖೆ

ಪಿ.ಆರ್. 1159

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ರಾಮಚಂದ್ರಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ ಇವರ ವಿರುದ್ಧ ಇಲಾಖಾ ವಿಚಾರಣೆ– ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಕ ಮಾಡುವ ಬಗ್ಗೆ.–

**ಓದಲಾಗಿದೆ :**
1) ನೋಟೀಸ್ ಸಂಖ್ಯೆ: ಸಿಆಸುಇ 11 ಸೇಇವಿ 2009, ದಿನಾಂಕ 03–02–2011
2) ಶ್ರೀ ರಾಮಚಂದ್ರಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ 10–03–2011.

**ಪ್ರಸ್ತಾವನೆ :**

ಶ್ರೀ ರಾಮಚಂದ್ರಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ ಇವರು ಈ ಹಿಂದೆ ವಸತಿ ಇಲಾಖೆಯಲ್ಲಿ ಶಾಖಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ 1998ರಲ್ಲಿ ನಡೆದ ಎರಡನೇ ದರ್ಜೆ ಸಹಾಯಕರ ಹುದ್ದೆ ಪರೀಕ್ಷೆಯಲ್ಲಿ ಶ್ರೀ ರಂಗನಾಥ ಎಂಬುವವರನ್ನು ಆಯ್ಕೆ ಮಾಡಿಸುವುದಾಗಿ ಹೇಳಿ ಅವರ ತಂದೆ ಶ್ರೀ ಜಿ. ಸುಗ್ಗಯ್ಯ ಎಂಬ ಚನ್ನರಾಯಪಟ್ಟಣ ನಿವಾಸಿಯಿಂದ ರೂ. 75,000/– ಅಕ್ರಮ ಸಂಭಾವನೆ ಪಡೆದು, ಆ ನಂತರ ಆಯ್ಕೆ ಮಾಡಿಸಲು ಸಾಧ್ಯವಾಗದ ಕಾರಣ ಅವರಿಂದ ಅಕ್ರಮವಾಗಿ ಪಡೆದ ಸಂಭಾವನೆಯನ್ನು ಹಿಂತಿರುಗಿಸುವುದಾಗಿ ತಿಳಿಸಿ ಅದನ್ನು ಪಡೆಯಲು ಬಂದಾಗ ಪಾವತಿಸದೇ ವಂಚಿಸಿ, ಆ ನಂತರ ಈ ಕುರಿತು ವಿಧಾನ ಸೌಧ ಪೊಲೀಸ್ ಠಾಣೆಯಲ್ಲಿ ದಾಖಲಿಸಿದ ಫಿರ್ಯಾದಿನ ಕುರಿತು ತನಿಖೆ ನಡೆಯುತ್ತಿದ್ದ ಸಂದರ್ಭದಲ್ಲಿ ಫಿರ್ಯಾದುದಾರರಾದ ಶ್ರೀ ಜಿ. ಸುಗ್ಗಯ್ಯ ಇವರಿಗೆ ರೂ. 75,000/– ಗಳನ್ನು ಹಿಂತಿರುಗಿಸುವುದರ ಮೂಲಕ ಕ.ನಾ.ಸೇ. (ನಡತೆ) ನಿಯಮಗಳು 1966ನ್ನು ಉಲ್ಲಂಘಿಸಿ ಸರ್ಕಾರಿ ನೌಕರರಿಗೆ ತಕ್ಕದಲ್ಲದ ರೀತಿಯಲ್ಲಿ ವರ್ತಿಸಿ ತೀವ್ರ ಸ್ವರೂಪದ ದುರ್ನಡತೆ ಎಸಗಿದ್ದಾರೆಂಬ ಆರೋಪಗಳಿಗಾಗಿ ಸದರಿ ಅಧಿಕಾರಿಯವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರ ಅನ್ವಯ ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ 03–02–2011ರಲ್ಲಿ ನೋಟೀಸ್ ನೀಡುವ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಶ್ರೀ ರಾಮಚಂದ್ರಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ ರವರು ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ಮನವಿಯಲ್ಲಿ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸಿ, ಅವರ ವಿರುದ್ಧ ಮಾಡಲಾದ ಎಲ್ಲಾ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಸದರಿಯವರ ಪ್ರತಿರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಅವರು ಸಲ್ಲಿಸಿರುವ ಪ್ರತಿರಕ್ಷಣಾ ಹೇಳಿಕೆಯಲ್ಲಿ ಪರಿಗಣಿಸಬಹುದಾದ ಯಾವ ಅಂಶಗಳು ಕಂಡು ಬಂದಿಲ್ಲವಾದ ಹಿನ್ನೆಲೆಯಲ್ಲಿ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿ, ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 11 ಸೇಇವಿ 2009, ಬೆಂಗಳೂರು, ದಿನಾಂಕ : 21–04–2011**

ಶ್ರೀ ರಾಮಚಂದ್ರಯ್ಯ, ಹಿಂದಿನ ಶಾಖಾಧಿಕಾರಿ, ವಸತಿ ಇಲಾಖೆ, ಪ್ರಸ್ತುತ ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ. ಉಮೇಶ್, ನಿರ್ದೇಶಕರು, ಕರ್ನಾಟಕ ಸರ್ಕಾರ ಸಚಿವಾಲಯ ತರಬೇತಿ ಸಂಸ್ಥೆ, ವಿಶ್ವೇಶ್ವರಯ್ಯ ಗೋಪುರ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಇದೇ

ನಿಯಮಾವಳಿಗಳ ನಿಯಮ 11(5)(ಸಿ)ರ ಅನ್ವಯ ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಆಡಳಿತ-2) ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡುತ್ತದೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳಿಗೆ ವಿಚಾರಣೆಯನ್ನು ನಡೆಸಿ ಆರೋಪ ಸಾಬೀತಾಗಿರುವ ಅಥವಾ ಸಾಬೀತಾಗದೇ ಇರುವ ಅಭಿಪ್ರಾಯಗಳನ್ನು ಒಳಗೊಂಡ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಿಯಾದ ನೀವು ಸರ್ಕಾರಕ್ಕೆ 3 ತಿಂಗಳುಗಳ ಒಳಗಾಗಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ. ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1160 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ತಿದ್ದೋಲೆ

ಸಂಖ್ಯೆ: ಸಿಆಸುಇ 36 ಶಿಸನೇ 2011, ಬೆಂಗಳೂರು, ದಿನಾಂಕ 12-04-2011

ಸರ್ಕಾರದ ದಿನಾಂಕ 07-04-2011ರ ಆದೇಶ ಸಂಖ್ಯೆ: ಸಿಆಸುಇ 36 ಶಿಸನೆ 2011ರ ಆದೇಶ ಭಾಗದ ಮೊದಲನೇ ಕಂಡಿಕೆಯಲ್ಲಿ ತಿಳಿಸಿರುವ ಈ ಕೆಳಕಂಡ:-

"ಶ್ರೀ ಬ್ರಹ್ಮದತ್ತ, ನಿವೃತ್ತ ಭಾರತ ಸರ್ಕಾರದ ಭೂಸಾರಿಗೆ ಕಾರ್ಯದರ್ಶಿಗಳು (ಕರ್ನಾಟಕ ವೃಂದದ ಐ.ಎ.ಎಸ್. ಅಧಿಕಾರಿ) ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ **ಮಾನ್ಯ ಮುಖ್ಯ ಮಂತ್ರಿಗಳ ಸಲಹೆಗಾರರು (ರಸ್ತೆಗಳು ಮತ್ತು ಹೆದ್ದಾರಿ)** ಎಂದು ನೇಮಕ ಮಾಡಲಾಗಿದೆ" ಎಂಬ ಪದಗಳಿಗೆ ಬದಲಾಗಿ.

"ಶ್ರೀ ಬ್ರಹ್ಮದತ್ತ, ನಿವೃತ್ತ ಭಾರತ ಸರ್ಕಾರದ ಭೂಸಾರಿಗೆ ಕಾರ್ಯದರ್ಶಿಗಳು, (ಕರ್ನಾಟಕ ವೃಂದದ ಐ.ಎ.ಎಸ್. ಅಧಿಕಾರಿ) ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶಗಳವರೆಗೆ **ಸರ್ಕಾರದ ಸಲಹೆಗಾರರು (ರಸ್ತೆಗಳು ಮತ್ತು ಹೆದ್ದಾರಿ)** ಎಂದು ನೇಮಕ ಮಾಡಲಾಗಿದೆ" ಎಂದು ಓದಿಕೊಳ್ಳತಕ್ಕದ್ದು.

ಉಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ವಿ. ರಾಮು**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 1161 ಸಿಆಸುಇ (ರಾಜ್ಯ ಶಿಷ್ಟಾಚಾರ-1)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ ಚಿಕ್ಕೋಡಿ ಪಟ್ಟಣಕ್ಕೆ ಅಂದಾಜು ರೂ. 50.00 ಕೋಟಿಗಳ ವೆಚ್ಚದಲ್ಲಿ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲು ತಾತ್ವಿಕವಾಗಿ ಅನುಮೋದನೆಯನ್ನು ನೀಡುವ ಕುರಿತು.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒ.ಚ. ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ : ಕಜಮಂ:ವ್ಯ.ನಿ./ಮುಅ(ಉ)/ಅಶ್ರೀಕಾಅ(ಜಿ)/ಉಮುಅ-2/ತಾಸ-1/3679/2010-11 ದಿನಾಂಕ : 21-01-2011.

**ಪ್ರಸ್ತಾವನೆ:**

ಚಿಕ್ಕೋಡಿ ಪಟ್ಟಣವು ಬೆಳಗಾವಿ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, ಈ ಪಟ್ಟಣದ ಜನಸಂಖ್ಯೆಯು 2001ರ ಜನಗಣತಿ ಪ್ರಕಾರ 31,820 ಆಗಿದ್ದು, ಪ್ರಸ್ತುತ 38,970 ಆಗಿರುತ್ತದೆ. ಈ ಪಟ್ಟಣದ ಜನಸಂಖ್ಯೆಯು 2042ರ ವೇಳೆಗೆ 63,485 ಆಗಬಹುದೆಂದು ಅಂದಾಜಿಸಲಾಗಿದೆ.

ಪ್ರಸ್ತುತ ಈ ಪಟ್ಟಣಕ್ಕೆ ಕೃಷ್ಣ ನದಿ ಮೂಲದಿಂದ 2ನೇ ಹಂತದ ನೀರು ಸರಬರಾಜು ಯೋಜನೆಯಡಿ ತಲಾ ದಿನಂಪ್ರತಿ 135 ಲೀಟರ್‌ನಂತೆ ನೀರು ಸರಬರಾಜು ಮಾಡಲಾಗುತ್ತಿದೆ. ಈ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯು ಇರುವುದಿಲ್ಲ. ಹೆಚ್ಚಿನ ಜನಸಂಖ್ಯೆಯು ಇಂಗುತೊಟ್ಟಿ ಮತ್ತು ಅಳಗುಂಡಿಗಳನ್ನು ತೋಡಿಕೊಂಡಿದ್ದು, ಕಲ್ಮಶ ನೀರನ್ನು ನಾಲೆಗಳ ಮತ್ತು ಚರಂಡಿಗಳ ಮೂಲಕ ಹರಿದು ಬಿಡುತ್ತಿರುವ ಕಾರಣ ಜನಗಳ ಆರೋಗ್ಯದ ಮೇಲೆ ಪ್ರಭಾವ ಬೀರುತ್ತಿದೆ. ಇದಲ್ಲದೆ, ಪರಿಸರ ಮಾಲಿನ್ಯವಾಗುತ್ತಿದ್ದು, ಜನಗಳ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟುಮಾಡುತ್ತಿದೆ.

ಆದ್ದರಿಂದ, ಈ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲು 2042ರಲ್ಲಿ ಅಂದಾಜಿಸಲಾದ ಜನಸಂಖ್ಯೆಗೆ ಯೋಜನೆಯನ್ನು ವಿನ್ಯಾಸಿಸಿ, 2010-11ನೇ ಸಾಲಿನ ಮಂಡಳಿಯ ಮತ್ತು ಲೋಕೋಪಯೋಗಿ ಇಲಾಖೆಯ ದರಪಟ್ಟಿ ಆಧರಿಸಿ ರೂ. 5000-00 ಲಕ್ಷಗಳಿಗೆ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿಯವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಕೋರಿರುತ್ತಾರೆ.

| | | | |
|---|---|---|---|
| 1. | ಸರ್ಕಾರದ ಸಾಲ (ಶೇ.30) | : | ರೂ. 1500.00 ಲಕ್ಷಗಳು |
| 2. | ಆರ್ಥಿಕ ಸಂಸ್ಥೆಯಿಂದ ಸಾಲ (ಶೇ. 50) | : | ರೂ. 2500.00 ಲಕ್ಷಗಳು |
| 3. | ಸ್ಥಳೀಯ ಸಂಸ್ಥೆಯ ವಂತಿಕೆ (ಶೇ. 20) | : | ರೂ. 1000.00 ಲಕ್ಷಗಳು |
| | ಒಟ್ಟು | | ರೂ. 5000.00 ಲಕ್ಷಗಳು |

ಈ ಯೋಜನೆಯನ್ನು ಮಂಡಳಿಯ 2010-11ನೇ ಸಾಲಿನ ಪರಿಷ್ಕೃತ ಕ್ರಿಯಾ ಯೋಜನೆಯಲ್ಲಿ ಸೇರಿಸಿ, ರೂ. 1666.67 ಲಕ್ಷಗಳನ್ನು ಅನುವು ಮಾಡಲಾಗಿದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 04 ಯುಡಿಎಸ್ 2011, ಬೆಂಗಳೂರು, ದಿನಾಂಕ: 31-03-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 5000-00 ಲಕ್ಷಗಳಲ್ಲಿ (ರೂ. ಐದು ಸಾವಿರ ಲಕ್ಷಗಳು ಮಾತ್ರ) ಯೋಜನೆಯನ್ನು ಕಲ್ಪಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಒಳಚರಂಡಿ ಯೋಜನೆಯಡಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ತಾತ್ವಿಕವಾಗಿ ಸರ್ಕಾರದ ಅನುಮೋದನೆಯನ್ನು ನೀಡಿದೆ.

1) The Escalation charges should not form part of the estimate. It should be borne by the concerned CMC. The estimate should be reduced to such extent.
2) ETP & contingencies to be restricted to 5%.
3) Resolution of the Local body to bear the project cost should be sought and if any deviations and extra item works or variations should be taken up only after the consent of the Urban Local Body with a condition for the commitment of the ULB for the extra cost.
4) Adequate provision to be made by the Board in the following years for timely completion of the Project.
5) Escalations and Tender premium should be approved with the prior consent of the ULB.
6) Water rates as proposed by KUWS & DB have to be implemented to meet O & M cost.
7) KTPP provisions, quality control and timely completion should ensured.
8) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.
9) ಸದರಿ ಕಾಮಗಾರಿಯನ್ನು ನಿಗದಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ : FD 90 Exp-9:2011, ದಿನಾಂಕ : 05-03-2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ.ಹಿರೇಮಠ**

ಪಿ.ಆರ್. 1083

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆ, ಹುಮ್ನಾಬಾದ್ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪ-1)ಕ್ಕೆ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ನಅಇ 59 ಬೆಮಪ್ರಾ 2007 ದಿನಾಂಕ : 09-04-2007.
2. ಹುಮ್ನಾಬಾದ್ ಪುರಸಭಾ ಯೋಜನಾ ಪ್ರಾಧಿಕಾರದ ಪತ್ರ ಸಂಖ್ಯೆ : ಪುಯೋಪುಹು:ಮಾಪ್ಲಾ: 2010-11, ದಿನಾಂಕ : 30-10-2010.
3. ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತ ಸಂಖ್ಯೆ:ನಗ್ರಾಯೋ:7:ಉನಿ(ಯೋವಿ):ಮ.ಯೋ(ಪ-1):ತಾತ್ಕಾಲಿಕ:100:2010-11ರಲ್ಲಿ ನೀಡಿರುವ ಅಭಿಪ್ರಾಯ ದಿನಾಂಕ : 13-12-2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರದ ಆದೇಶದಲ್ಲಿ ಹುಮ್ನಾಬಾದ್ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಪತ್ರದಲ್ಲಿ ಪುರಸಭಾ ಯೋಜನಾ ಪ್ರಾಧಿಕಾರವು ಹುಮ್ನಾಬಾದ್ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಯನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(ಡಿ)ರನ್ವಯ ಪರಿಷ್ಕರಿಸಿ, ಮಹಾ ಯೋಜನೆ (ಪರಿಷ್ಕೃತ-1)ನ್ನು ರೂಪಿಸಿ ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ಪ್ರಸ್ತಾವನೆಯನ್ನು ಸಲ್ಲಿಸಿದೆ.

ಮೇಲೆ ಓದಲಾದ ಕ್ರಮಾಂಕ (3)ರ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು, ಹುಮ್ನಾಬಾದ್ ಪಟ್ಟಣದ ಜನಸಂಖ್ಯೆಯ 2021ರಲ್ಲಿ 7,200 ಗಳಿಗೆ ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾ ಯೋಜನೆ (ಪರಿಷ್ಕೃತ-1)ನ್ನು ರೂಪಿಸಲಾಗಿದೆ. ಹುಮ್ನಾಬಾದ್ ಪಟ್ಟಣದ ಜನಸಂಖ್ಯೆ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹಾಲಿ ಬೆಳವಣಿಗೆಯ ಗತಿ, ಹವಾಗುಣ, ರಸ್ತೆಗಳ ಹಾಲಿ ಪರಿಚಲನೆ ವ್ಯವಸ್ಥೆಯ ಸಮಸ್ಯೆಗಳನ್ನು ವಿಶ್ಲೇಷಿಸಿ, ಯೋಜನಾ ತತ್ವಗಳಿಗೆ ಅನುಗುಣವಾಗಿ ಹಾಗೂ ಮಹಾ ಯೋಜನೆಯ ತಯಾರಿಕೆ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ (9) ರಿಂದ (12)ರವರೆಗೆ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ, ನಗರದ ಯೋಜಿತ ಬೆಳವಣಿಗೆಗಾಗಿ ಪ್ರಸ್ತಾಪಿಸಿರುವ ಒಟ್ಟು 960.00 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 520.80 ಹೆಕ್ಟೇರ್ (ಶೇ. 54.25), ವಾಣಿಜ್ಯಕ್ಕಾಗಿ 38.00 ಹೆಕ್ಟೇರ್ (ಶೇ. 3.96), ಕೈಗಾರಿಕೆಗಾಗಿ 25.53 ಹೆಕ್ಟೇರ್ (ಶೇ. 2.67), ಸಾರ್ವಜನಿಕ : ಅರೆ ಸಾರ್ವಜನಿಕ ಉಪಯೋಗಕ್ಕೆ 62.97 ಹೆಕ್ಟೇರ್ (ಶೇ. 6.56) ಉದ್ಯಾನವನ ಮತ್ತು ಬಯಲು ಜಾಗಕ್ಕಾಗಿ 80.48 ಹೆಕ್ಟೇರ್ (ಶೇ. 8.38), ಸಾರಿಗೆ/ಸಂಪರ್ಕ ವಲಯಕ್ಕೆ 227.34 ಹೆಕ್ಟೇರ್ (ಶೇಕಡ 23.67) ಹಾಗೂ ನಾಗರೀಕ ಸೌಲಭ್ಯಕ್ಕಾಗಿ 4.88 ಹೆಕ್ಟೇರ್

(ಶೇ.0.51) ಪ್ರದೇಶವನ್ನು ನಿಗದಿಪಡಿಸಲಾಗಿದೆ. ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1)ರನ್ವಯ ಸರ್ಕಾರದ ತಾತ್ಕಾಲಿಕ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 204 ಗುಅಪ್ರಾ 2010, ಬೆಂಗಳೂರು, ದಿನಾಂಕ: 31–03–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಹುಮ್ನಾಬಾದ್ ಪಟ್ಟಣದ ಸ್ಥಳೀಯ ಯೋಜನ ಆ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆ (ಪರಿಷ್ಕೃತ–1)ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(1)ರನ್ವಯ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡಲಾಗಿದೆ.

ಮಹಾ ಯೋಜನೆ (ಪರಿಷ್ಕೃತ–1)ಗೆ ಕ್ಕೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ.ಹಿರೇಮಠ**

ಪಿ.ಆರ್. 1084

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಹಾಸನ ಜಿಲ್ಲೆ, ಬೇಲೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಎಂ/1999, ದಿನಾಂಕ : 10–05–2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು, ಅದರಂತೆ ಹಾಸನ ಜಿಲ್ಲೆ, ಬೇಲೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 166 ಹೆಚ್ಎಎಸ್ 2010, ಬೆಂಗಳೂರು, ದಿನಾಂಕ: 05–04–2011**

ಹಾಸನ ಜಿಲ್ಲೆ, ಬೇಲೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ನಜೀರ್ ಸಾಬ್ ಮಹಮದ್ ಇಸ್ಮಾಯಿಲ್, ಮುಸ್ತಾಪ ಬೀದಿ, ಬೇಲೂರು | ಅಲ್ಪಸಂಖ್ಯಾತರು |
| 2 | ಶ್ರೀ ಹೆಚ್. ವೈ. ಯೋಗೇಶ್ ಬಿನ್ ಯಜಮಾನ್ ಗೌಡ, ಕೆರೆಬೀದಿ, ಬೇಲೂರು | ಸಾಮಾನ್ಯ |
| 3 | ಶ್ರೀ ಚಂದ್ರಶೇಖರ್ ಬಿನ್ ರಾಜಣ್ಣ, ದೇವಾಂಗ ಬೀದಿ, ಬೇಲೂರು | ಹಿಂದುಳಿದ ವರ್ಗ |
| 4 | ಶ್ರೀಮತಿ ಜಯಮ್ಮ ಕೋಂ ಶಿವರಾಮಯ್ಯ, ಬೇಲೂರು ಹೆಡ್ ಪೋಸ್ಟ್ ಆಫೀಸ್ ಕ್ವಾರ್ಟರ್ಸ್, ಬೇಲೂರು ತಾಲ್ಲೂಕು | ಪರಿಶಿಷ್ಟ ಜಾತಿ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1085

**ಕೆ.ಆರ್.ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

## ಆರ್ಥಿಕ ಸಚಿವಾಲಯ

**ವಿಷಯ :** ವೆಚ್ಚ ಸುಧಾರಣಾ ಆಯೋಗದ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಆಇ 76 ಸಮಯ 2009, ದಿನಾಂಕ : 06–06–2009.

2. ಸರ್ಕಾರದ ಆದೇಶ ಸಂಖ್ಯೆ : ಆಇ 54 ಸಮಯ 2010, ದಿನಾಂಕ : 05–06–2010.

3. ಅಧ್ಯಕ್ಷರು, ವೆಚ್ಚ ಸುಧಾರಣಾ ಆಯೋಗ ಇವರ ಪತ್ರ ಸಂಖ್ಯೆ : ಇಆರ್‌ಸಿ/ಬಿಎಲ್‌ಆರ್/61/2010–11, ದಿನಾಂಕ : 15–03–2011.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದ ದಿನಾಂಕ : 06–06–2009ರಲ್ಲಿ ಅಧ್ಯಕ್ಷರು, ಸದಸ್ಯರು ಮತ್ತು ಒಬ್ಬರು ಕಾರ್ಯದರ್ಶಿಯನ್ನೊಳಗೊಂಡಂತೆ ವೆಚ್ಚ ಸುಧಾರಣಾ ಆಯೋಗವನ್ನು ಒಂದು ವರ್ಷದ ಅವಧಿಗೆ ರಚನೆ ಮಾಡಿ ಆದೇಶ ಹೊರಡಿಸಲಾಗಿತ್ತು. ಮುಂದುವರೆದು ಮೇಲೆ ಓದಲಾದ (2)ರ ದಿನಾಂಕ : 05–06–2010ರ ಸರ್ಕಾರಿ ಆದೇಶದಲ್ಲಿ ಆಯೋಗದ ಅವಧಿಯನ್ನು ದಿನಾಂಕ : 31–03–2011ರವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ. ಮೇಲೆ ಓದಲಾದ (3)ರ ಪತ್ರದಲ್ಲಿ ಅಧ್ಯಕ್ಷರು, ವೆಚ್ಚ ಸುಧಾರಣಾ ಆಯೋಗರವರು ಸದರಿ ಆಯೋಗದ ಅವಧಿಯು ದಿನಾಂಕ : 31–03–2011ಕ್ಕೆ ಮುಕ್ತಾಯಗೊಳ್ಳಲಿದ್ದು, ಆಯೋಗದ ಕೆಲಸ ಕಾರ್ಯಗಳು ಮುಕ್ತಾಯದ ಹಂತದಲ್ಲಿರುವುದರಿಂದ ಅವುಗಳನ್ನು ಪೂರ್ಣಗೊಳಿಸಿ ಅಂತಿಮ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲು ಕಾಲಾವಕಾಶ ಕೋರಿ ಇನ್ನೊಂದು ಅವಧಿಗೆ ಅಂದರೆ ದಿನಾಂಕ : 01–04–2011 ರಿಂದ ದಿನಾಂಕ : 30–06–2011 ರವರೆಗೆ ವಿಸ್ತರಿಸಲು ಕೋರಿರುತ್ತಾರೆ.

ಅಧ್ಯಕ್ಷರು, ವೆಚ್ಚ ಸುಧಾರಣಾ ಆಯೋಗ ರವರ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಲಾಗಿದ್ದು, ಸದರಿ ಆಯೋಗದ ಅವಧಿಯನ್ನು ದಿನಾಂಕ : 01–04–2011 ರಿಂದ ದಿನಾಂಕ : 30–06–2011ರವರೆಗೆ ವಿಸ್ತರಿಸಲು ತೀರ್ಮಾನಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆಇ 54 ಸಮಯ 2010, ಬೆಂಗಳೂರು, ದಿನಾಂಕ: 07–04–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಆಇ 76 ಸಮಯ 2009, ದಿನಾಂಕ : 06–06–2009ರಲ್ಲಿ ರಚಿತವಾಗಿರುವ ಹಾಗೂ ಸರ್ಕಾರಿ ಆದೇಶ ಸಂಖ್ಯೆ : ಆಇ 54 ಸಮಯ 2010ರಲ್ಲಿ ಆಯೋಗದ ಅವಧಿಯನ್ನು ದಿನಾಂಕ : 31–03–2011 ರವರೆಗೆ ವಿಸ್ತರಿಸಲಾಗಿರುವ ವೆಚ್ಚ ಸುಧಾರಣಾ ಆಯೋಗದ ಅವಧಿಯನ್ನು ದಿನಾಂಕ : 01–04–2011 ರಿಂದ ದಿನಾಂಕ : 30–06–2011 ರವರೆಗೆ ಮತ್ತೊಮ್ಮೆ ವಿಸ್ತರಿಸಿ ಆದೇಶಿಸಲಾಗಿದೆ. ಉಳಿದಂತೆ ದಿನಾಂಕ : 06–06–2009ರ ಆದೇಶದಲ್ಲಿನ ಷರತ್ತು ಮತ್ತು ನಿಬಂಧನೆಗಳು ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಾಮಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ವಾ.ತೆ.–2 & ಸಮನ್ವಯ)

ಪಿ.ಆರ್. 1086

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** 2011–12ನೇ ಸಾಲಿನಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ ಯೋಜನೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಮುಖ್ಯ ಕಾರ್ಯದರ್ಶಿಯವರ ಸುತ್ತೋಲೆ ಸಂಖ್ಯೆ : ಪಿಡಿ 05 ಐಎಂಎಂ 2011 ದಿನಾಂಕ : 05–03–2011.
2. ದಿನಾಂಕ : 24–03–2011ರ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮಲೆನಾಡು ಪ್ರದೇಶಾಭಿವೃದ್ಧಿ ಯೋಜನೆಯಡಿ 2011–12ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2515–00–800–0–05–101 ಅಡಿಯಲ್ಲಿ ರೂ. 100.00 ಲಕ್ಷಗಳು, ಲೆಕ್ಕಶೀರ್ಷಿಕೆ 4515–00–800–0–03–132 ಅಡಿಯಲ್ಲಿ ರೂ. 2550.00 ಲಕ್ಷಗಳಂತೆ, ಲೆಕ್ಕಶೀರ್ಷಿಕೆ 4515–00–800–0–03–422 ಅಡಿಯಲ್ಲಿ ರೂ. 525.00 ಲಕ್ಷಗಳಂತೆ ಹಾಗೂ ಲೆಕ್ಕಶೀರ್ಷಿಕೆ 4515–0–800–0–03–423 ಅಡಿಯಲ್ಲಿ ರೂ. 225.00 ಲಕ್ಷಗಳಂತೆ ಒಟ್ಟು ರೂ. 3400.00 ಲಕ್ಷಗಳನ್ನು ಒದಗಿಸಲಾಗಿದೆ.

ಈ ಯೋಜನೆಯಡಿ ಯಾವುದೇ ಮಾರ್ಪಾಟು ಇಲ್ಲದಿರುವುದರಿಂದ ಸರ್ಕಾರಿ ಆದೇಶ ಸಂಖ್ಯೆ : ಪಿಡಿ 17 ಐಎಂಎಂ 2005, ದಿನಾಂಕ : 10–08–2005 ರನ್ವಯ ಹಾಗೂ ದಿನಾಂಕ : 24–03–2011ರಂದು ಪ್ರಧಾನ ಕಾರ್ಯದರ್ಶಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಈ ಯೋಜನೆಯನ್ನು 2011–12ನೇ ಸಾಲಿನಲ್ಲಿ ಮುಂದುವರೆಸಲು ನಿರ್ಣಯಿಸಲಾಯಿತು. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಯೋಇ 05 ಮಪ್ರಮಂ 2011, ಬೆಂಗಳೂರು, ದಿನಾಂಕ: 31–03–2011**

2011–12ನೇ ಸಾಲಿನ ಆಯವ್ಯಯದಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಯೋಜನೆಗೆ ಲೆಕ್ಕಶೀರ್ಷಿಕೆ 2515–00–800–0–05–101 ಅಡಿಯಲ್ಲಿ ರೂ. 100.00 ಲಕ್ಷಗಳು, ಲೆಕ್ಕಶೀರ್ಷಿಕೆ 4515–00–800–0–03–132 ಅಡಿಯಲ್ಲಿ ರೂ. 2550.00 ಲಕ್ಷಗಳು, ಲೆಕ್ಕಶೀರ್ಷಿಕೆ 4515–00–800–0–03–422 ಅಡಿಯಲ್ಲಿ ರೂ. 525.00 ಲಕ್ಷಗಳು ಹಾಗೂ ಲೆಕ್ಕಶೀರ್ಷಿಕೆ 4515–0–800–0–03–423 ಅಡಿಯಲ್ಲಿ ರೂ. 225.00 ಲಕ್ಷಗಳಂತೆ ಒಟ್ಟು ರೂ. 3400.00 ಲಕ್ಷಗಳ ಯೋಜನೆಗೆ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಚಿಕ್ಕರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ 1 & 2
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್. 1087

## INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT

**Sub:** Approval of the Project proposal of M/s Aubergine Properties P Limited to establish "Development of Software Technology Park & Hospitality Service" project at Kannamangala Village, Bidarahalli Hobli, B'lore East Tq. Bangalore Urban District.

Read: Proceedings of the 24th State High Level Clearance Committee (SHLCC) meeting held on 24-01-2011.

**Preamble** :

M/s Tally Solutions P Limited has proposed to establish "Development of Software Technology Park & Hospitality Service" project at Kannamangala Village, Bidarahalli Hobli, B'lore East Tq. Bangalore Urban District at a cost of Rs. 164 Crores.

In the proposal submitted for the 24th State High Level Clearance Committee (SHLCC) meeting held on 24-01-2011, the Company had requested to approve the project. The Project proposes to provide employment to about 10220 persons.

The State High Level Clearance Committee, after detailed discussion, approved the proposal of M/s Aubergine Properties P Limited and recommended to grant infrastructure facilities and extend incentives and concessions.

Hence, the following order.

**Government Order No.: ITD 03 MDA 2011 (5) Bangalore, Dated: 25-03-2011**

In the circumstances explained in the preamble, Government are pleased to accord approval in-principle to establish "Development of Software Technology Park & Hospitality Service" project by the company at IT Park Devanahalli Taluk Bangalore

Rural District at a cost of Rs. 164 Crores with following conditions and extended the infrastructure facilities, incentives and concessions.

**INFRASTRUCTURE FACILITIES :**

**LAND :** The company is permitted to establish the project in 04.65 Acres of land on joint development at Sy. Nos. 173/1 & 173/2, Kannamangala Village, Bidarahalli Hobli, B'lore East Tq. Bangalore Urban District.

**POWER :** 7000 KVA to be serviced by BESCOM.

**WATER :** 310 KLPD to be supplied by BWSSB.

**INCENTIVES AND CONCESSIONS :** As per Millennium IT Policy of the State.

**Conditions :**

a) The allocation of water for the projects from the reservoirs will not be considered. The project proponents to explore the possibility of drawing water from downstream of the reservoirs, subject to approval of Water Resources Department. The project proponents will furnish the exact drawl point to WRD for further examination and consideration.

b) The project proponents shall adopt rain water harvesting waste water adopt rain water harvesting, waste water recycling and water conservation facilities. Wherever applicable, Zero discharge facility should be adopted.

c) The project proponents shall take necessary statutory clearances and plan approvals from the competent authorities before stating the project.

d) The project proponents shall provide a plan for development of human resource required for the project, and to train and provide employment to local people as per Dr. Sarojini Mahishi report and as per the respective policies of the State Government.

e) Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units.

f) The project implementation time for the proposal is 3 years, which is considered from the date obtaining necessary permission from the Government.

**Others :**

The Promoter shall submit milestones/progress in implementation of the project regularly, which will be monitored by the Departments concerned.

By Order and in the name of the Governor of Karnataka
**K. Borlingaiah**
Under Secretary to Government (I/C)
Information Technology, Biotechnology and
Science and Technology Department.

PR No. 1088

## INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT

**Sub:** Approval of the Project proposal of M/s Champion Luxury Resorts Pvt. Ltd. to establish "IT Park with 3 Star Hotel, Luxury Villas & Serviced Apartments" project at Mullur Village, Varthur Hobli, Bangalore East Taluk, Bangalore District.

Read: Proceedings of the 24th State High Level Clearance Committee (SHLCC) meeting held on 24-01-2011.

**Preamble :**

M/s Champion Luxury Resorts Pvt. Ltd. has proposed to establish "IT Park with 3 Star Hotel, Luxury Villas & Serviced Apartments" project at Mullur Village, Varthur Hobli, Bangalore East Taluk, Bangalore District.at a cost of Rs. 164 Crores.

In the proposal submitted for the 24th State High Level Clearance Committee (SHLCC) meeting held on 24-01-2011, the Company had requested to approve the project. The Project proposes to provide employment to about 164 persons.

The State High Level Clearance Committee, after detailed discussion, approved the proposal of M/s Champion Luxury Resorts Pvt. Ltd and recommended to grant infrastructure facilities and extend incentives and concessions.

Hence, the following order.

**Government Order No.: ITD 03 MDA 2011 (6) Bangalore, Dated: 25-03-2011**

In the circumstances explained in the preamble, Government are pleased to accord approval in-principle to establish "IT Park with 3 Star Hotel, Luxury Villas & Serviced Apartments" project by the company at Mullur Village, Varthur Hobli, Bangalore East Taluk, Bangalore District at a cost of Rs.164 Crores with following conditions and extended the infrastructure facilities, incentives and concessions.

**INFRASTRUCTURE FACILITIES :**

**LAND :** The company is permitted to establish the project in 7 Acres of land at Sy. Nos. 46,47,91 & 92 of Mullur Village, Varthur Hobli, Bangalore East Taluk, Bangalore District

**POWER :** 3000 KVA to be serviced by BESCOM.

**WATER :** 3330 KLPD to be supplied by BWSSB.

**INCENTIVES AND CONCESSIONS :** As per Millennium IT Policy of the State for IT Park Portion.

**Conditions :**

a) The allocation of water for the projects from the reservoirs will not be considered. The project proponents to explore the possibility of drawing water from downstream of the reservoirs, subject to approval of Water Resource Department. The project proponents will furnish the exact drawal point to WRD for further examination and consideration.

b) The project proponents shall adopt rain water harvesting waste water adopt rain water harvesting, waste water recycling and water conservation facilities. Wherever applicable, Zero discharge facility should be adopted.

c) The project proponents shall take necessary statutory clearances and plan approvals from the competent authorities before starting the project.

d) The project proponents shall provide a plan for development of human resource required for the project, and to train and provide employment to local people as per Dr. Sarojini Mahishi report and as per the respective policies of the State Government.

e) Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units.

f) The project implementation time for the proposal is 3 years, which is considered from the date obtaining necessary permission from the Government.

**Others :**

The Promoter shall submit milestones/progress in implementation of the project regularly, which will be monitored by the Departments concerned.

By Order and in the name of the Governor of Karnataka

**K. Borlingaiah**

Under Secretary to Government (I/C)

Information Technology, Biotechnology and

Science and Technology Department.

PR No. 1089

## INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT

**Sub:** Approval of the Project proposal of M/s Target Corporation India Pvt. Ltd. to establish “Software & Business Service Centre” project at Industrial Area, Devanahalli Taluk, Bangalore Rural District.

Read: Proceedings of the 24th State High Level Clearance Committee (SHLCC) meeting held on 24-01-2011.

**Preamble :**

M/s Target Corporation India Pvt. Ltd. has proposed to establish “Software & Business Service Centre” project at Industrial Area, Devanahalli Taluk, Bangalore Rural District at a cost of Rs. 300 Crores.

In the proposal submitted for the 24th State High Level Clearance Committee (SHLCC) meeting held on 24-01-2011, the Company had requested to approve the project. The Project proposes to provide employment to about 3500 persons.

The State High Level Clearance Committee, after detailed discussion, approved the proposal of M/s Target Corporation India Pvt. Ltd. and recommended to grant infrastructure facilities and extend incentives and concessions.

Hence, the following order.

**Government Order No.: ITD 03 MDA 2011 (7) Bangalore, Dated: 25-03-2011**

In the circumstances explained in the preamble, Government are pleased to accord approval in-principle to establish “Software & Business Service Centre” project by the Company at Industrial Area, Devanahalli Taluk, Bangalore Rural District at a cost of Rs.300 Crores with following conditions and extended the infrastructure facilities, incentives and concessions.

**INFRASTRUCTURE FACILITIES :**

**LAND :** The company is permitted to establish the project in 15 Acres of land in IT Park, Devanahalli Taluk, Bangalore Rural District.

**POWER :** 5000 KVA to be serviced by BESCOM.

**WATER :** 500 KLPD to be supplied by KIADB.

**INCENTIVES AND CONCESSIONS :** As per Millennium IT Policy of the State.

**Conditions :**

a) The allocation of water for the projects from the reservoirs will not be considered. The project proponents to explore the possibility of drawing water from downstream of the reservoirs, subject to approval of Water Resource Department. The project proponents will furnish the exact drawal point to WRD for further examination and consideration.

b) The project proponents shall adopt rain water harvesting waste water adopt rain water harvesting, waste water recycling and water conservation facilities. Wherever applicable, Zero discharge facility should be adopted.

c) The project proponents shall take necessary statutory clearances and plan approvals from the competent authorities before starting the project.

d) The project proponents shall provide a plan for development of human resource required for the project, and to train and provide employment to local people as per Dr. Sarojini Mahishi report and as per the respective policies of the State Government.

e) Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units.

f) The project implementation time for the proposal is 2 years, which is considered from the date of allotment of land by KIADB.

**Others :**

The Promoter shall submit milestones/progress in implementation of the project regularly, which will be monitored by the Departments concerned.

By Order and in the name of the Governor of Karnataka

**K. Borlingaiah**

Under Secretary to Government (I/C)

Information Technology, Biotechnology and

Science and Technology Department.

PR No. 1090

## ಕಂದಾಯ ಸಚಿವಾಲಯ

**ವಿಷಯ :** 2006ನೇ ತಂಡದ ತಹಶೀಲ್ದಾರರುಗಳ ಪ್ರೊಬೇಷನ್ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ಸಂ : ಕಂಇ 51 ಎಎಸ್‌ಡಿ 2008, ದಿನಾಂಕ : 23–05–2008.
2. ಸರ್ಕಾರದ ಅಧಿಕೃತ ಜ್ಞಾಪನ ಸಂ : ಆರ್‌ಡಿ 223 ಎಎಸ್‌ಡಿ 2008, ದಿನಾಂಕ : 11–06–2008.
3. ಸರ್ಕಾರದ ಆದೇಶ ಸಂ : ಆರ್‌ಡಿ 462 ಎಎಸ್‌ಡಿ 2010 ದಿನಾಂಕ : 21–01–2011 ಮತ್ತು 27–01–2011.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1) ದಿನಾಂಕ : 23–05–2008ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಒಟ್ಟು 40 ಅಭ್ಯರ್ಥಿಗಳಿಗೆ ಪ್ರೊಬೇಷನರ್ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿ ಆದೇಶ ನೀಡಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಒಟ್ಟು 40 ಪ್ರೊಬೇಷನರ್ ತಹಶೀಲ್ದಾರರುಗಳನ್ನು 2 ವರ್ಷಗಳ ಕಾಲ ಪ್ರೊಬೇಷನ್ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ ಎಲ್ಲಾ 40 ಪರಿವೀಕ್ಷಣಾ ತಹಶೀಲ್ದಾರರುಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

2) ಮೇಲೆ ಓದಲಾದ ಕ್ರ.ಸಂ. (2) ದಿನಾಂಕ : 11–06–2008ರಲ್ಲಿ ಎಲ್ಲಾ ಪ್ರೊಬೇಷನರ್ ತಹಶೀಲ್ದಾರರುಗಳಿಗೆ ಎರಡು ವರ್ಷಗಳ ತರಬೇತಿಗಾಗಿ ವಿವಿಧ ಜಿಲ್ಲೆಗಳಿಗೆ ತೈನಾತಿಸಲಾಗಿತ್ತು. ಆದರೆ, ಇವರುಗಳಲ್ಲಿ ವಿವಿಧ ಕಾರಣಗಳಿಂದ/ಬೇರೆ ಹುದ್ದೆಗೆ ನೇಮಕಗೊಂಡಿದ್ದರಿಂದ ಒಟ್ಟು 5 ಪ್ರೊಬೇಷನರ್ ತಹಶೀಲ್ದಾರರುಗಳು (ಶ್ರೀ ಶಂಭುಲಿಂಗಪ್ಪ, ಶ್ರೀ ಅಭ್ಯುದಯ ಎ. ಆನಂದ್, ಶ್ರೀ ಎಂ.ಜೆ.ಚೇತನ, ಶ್ರೀ ಪ್ರಸನ್ನಕುಮಾರ್ ಬಿ.ಕೆ ಮತ್ತು ಶ್ರೀ ಇಸ್ಲಾವುದ್ದೀನ್) ಸೇವೆಯಿಂದ ಬಿಟ್ಟುಹೋಗಿರುತ್ತಾರೆ.

3) ಮೇಲೆ ಓದಲಾದ ಕ್ರಮ ಸಂ. (3)ರಲ್ಲಿ ಉಳಿದ 35 ಜನ ಪ್ರೊಬೇಷನರ್ ತಹಶೀಲ್ದಾರರ ಪೈಕಿ 16 ಪ್ರೊಬೇಷನರ್ ತಹಶೀಲ್ದಾರರು ಇಲಾಖಾ ಪರೀಕ್ಷೆ ಪಾಸಾಗಿದ್ದು ಮತ್ತು ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರಲಿಲ್ಲವಾದ್ದರಿಂದ ಮತ್ತು ಇವರ ಕಾರ್ಯ ನಿರ್ವಹಣಾ ವರದಿಯು ಸಮರ್ಪಕವಾಗಿದ್ದುದರಿಂದ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಗಳು 1977ರ ಉಪ ನಿಯಮ 5(1)ರನ್ವಯ ಇವರ ಪ್ರೊಬೇಷನ್ ಅವಧಿಯು ತೃಪ್ತಿಕರವಾಗಿದೆ ಎಂದು ಘೋಷಿಸಲಾಗಿದೆ.

4) ಉಳಿದ ತಹಶೀಲ್ದಾರರುಗಳ ಪ್ರೊಬೇಷನ್ ಅವಧಿಯನ್ನು ಘೋಷಿಸುವ ಕುರಿತು ಜಿಲ್ಲಾಧಿಕಾರಿಗಳಿಂದ ಬಂದಿರುವ ಮಾಹಿತಿಯನ್ನು ಕ್ರೋಢೀಕರಿಸಲಾಗಿದೆ. ಈ ಮಾಹಿತಿ ಪ್ರಕಾರ ಪ್ರೊಬೇಷನ್ ಅವಧಿಯಲ್ಲಿನ ತೃಪ್ತಿಕರ ಕಾರ್ಯನಿರ್ವಹಣಾ ವರದಿಗಳು, ನಿಗದಿತ ಇಲಾಖೆ ಪರೀಕ್ಷೆಗಳಲ್ಲಿ ಪಾಸಾಗಿರುವ ಬಗ್ಗೆ ದೃಢೀಕೃತ ಸರ್ಟಿಫಿಕೇಟ್, ತರಬೇತಿ ತೃಪ್ತಿಕರವಾಗಿರುವ ಬಗ್ಗೆ ಮೇಲಾಧಿಕಾರಿಗಳು ಶಿಫಾರಸ್ಸು ಮಾಡಿರುವ ವಿವರ ಮತ್ತು ಪ್ರೊಬೇಷನ್ ಅವಧಿಯಲ್ಲಿ ಯಾವುದೇ ಇಲಾಖಾ ವಿಚಾರಣೆ ಬಾಕಿ ಇಲ್ಲದೇ ಇರುವ ಈ ಕೆಳಕಂಡ ನಾಲ್ಕು ಜನ ಪ್ರೊಬೇಷನರ್ ತಹಶೀಲ್ದಾರರುಗಳ ಬಗ್ಗೆ ಮಾತ್ರ ಸಂಪೂರ್ಣ ಮಾಹಿತಿ ಬಂದಿದ್ದು, ಇವರುಗಳ ಪ್ರೊಬೇಷನರಿ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಗಳು

1977ರ ಉಪ ನಿಯಮ 5(1)ರನ್ವಯ ಪ್ರೊಬೇಷನರ್ ತಹಶೀಲ್ದಾರರು ತೃಪ್ತಿಕರವಾಗಿ ಪ್ರೊಬೇಷನ್ ಅವಧಿಯನ್ನು ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 462 ಎಎಸ್‌ಡಿ 2010, ಬೆಂಗಳೂರು, ದಿನಾಂಕ: 02–04–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಈ ಕೆಳಕಂಡ ಪ್ರೊಬೇಷನರ್ ತಹಶೀಲ್ದಾರರುಗಳನ್ನು ಕರ್ನಾಟಕ ಸಿವಿಲ್ ಸೇವಾ (ಪ್ರೊಬೇಷನ್) ನಿಯಮಗಳು 1977ರ ನಿಯಮ 5(1)ರಡಿ ಪ್ರೊಬೇಷನ್ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಈ ಮೂಲಕ ಸರ್ಕಾರವು ಆದೇಶಿಸಿದೆ.

| ಕ್ರ.ಸಂ. | ಪ್ರೊಬೇಷನರ್ ತಹಶೀಲ್ದಾರರ ಹೆಸರು (ಶ್ರೀ/ಶ್ರೀಮತಿ) | ಪ್ರೊಬೇಷನ್ ಅವಧಿ ಪ್ರಾರಂಭವಾದ ದಿನಾಂಕ | ಪ್ರೊಬೇಷನ್ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | ರಾಜಶೇಖರ ದಂಬಾಲ್ | 06–06–2008 | 05–06–2010 |
| 2 | ಸೌಮ್ಯ ಎನ್. ಗೌಡ | 04–06–2008 | 03–06–2010 |
| 3 | ಸೈಯದ ಅಫ್ರೀನ ಬಾನು ಎಸ್.ಬಳ್ಳಾರಿ | 09–06–2008 | 08–06–2010 |
| 4 | ನಂದಿನಿ ಪಿ.ಎಂ. | 05–06–2008 | 04–06–2010 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1095

**ಜಿ. ಸಿದ್ದಗಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

## HEALTH AND FAMILY WELFARE SECRETARIAT

Sub: Daily Out-Patient and In-Patient Feedback Analysis System-reg.

Read: Proceedings of the 24th Programme Steering Committee held on dated : 10-02-2011.

**Preamble :**

In district level public health facilities of Karnataka, at present, no real-time techniques are being adopted to capture in-patient concerns in non-clinical support areas. This creates difficulty in timely corrections which are essential to bring continuous quality improvements that finally lead to enhanced patient satisfaction which is the goal of hospital care. Adopting such real-time techniques would result in hospital credence improvement and with it, the utilization of services. The daily monitoring of hospital OP/IP, house-keeping, diet and other services and their e-reporting provide online acess to the Hospital Administrator and availability and use of resources including human resources.

Daily Out-Patient and In-Patient Feedback Analysis System is a tool to guage and index the comfort levels of patients (when admitted in the hospital) with the help of predefined metrics. This tool helps in recognizing the services (clinical and non-clinical aspects) that are not reaching a patient. Feedback Analysis System not only monitors the provisioning of the services but also captures their performance against set benchmarks. This is tool for continuous quality improvement in a hospital.

Feedback Analysis System is a quality improvement tool, which will also have impact on post-discharge patient recall of hospital experience. It may be a tool that can potentiate efforts of accreditation process and may facilitate managerial responsibilities of the Hospital Administrator. It was proposed to adopt the "Daily Out-Patient and In-Patient Feedback Analysis System" at District Hospital Chickballapur and 100 bedded hospital, Ramanagar as a pilot scheme, for 1 year, with a total estimated budget of Rs. 23,00,000-00.

The Programme Steering Committee, vide Proceedings read above, has approved the same.

Hence, the following order.

**Government Order No.: HFW/KHSDRP/PPP/Feedback Analysis/32/2010-11 Bangalore, Dated: 28-03-2011**

Under the circumstances mentioned in the preamble, Government are pleased to accord approval to adopt the "Daily Out-Patient and In-Patient Feedback Analysis System" at District Hospital Chickballapur and 100 bedded hospital, Ramanagar as a pilot scheme, for 1 year, with a total estimated budget of Rs. 23,00,000-00 (Rupees twentythree lakhs only).

The above expenditure shall be debited under the Head of Account "2210-06-800-0-85-059 (P) SICF Other Expenses" for the corresponding financial year.

By order and in the name of the Governor of Karnataka

PR No. 1096

**M.Shashidhar**

Deputy Secretary to Government, KHSDRP

Health and Family Welfare Department.

## INFRASTRUCTURE DEVELOPMENT SECRETARIAT

Sub: Provision of Rs. 37.00 crores under SE-III in the budget for the year 2010-11 under the head of account 7465-00-800-0-01 - Giving contra credit to the head of account 5465-01-901-0-00.

Read: Endorsement bearing No. FD 1965 Exp-1/10 dated 04-02-2011 of the Finance Department.

**Preamble :**

Financial assistance is provided to Infrastructure Development Corporation (Karnataka) from out of the provision made under the head of account 5465-01-901-0-00 right from the year 2000-01. The assistance given to iDeCK right from the beginning is to meet the financial requirement to meet the project development and project investment expenses. iDeCK has been approaching

the Government, seeking orders to treat the assistance sanctioned to them as interest free loan repayable to the Government after 50 years. The Government, after having considered the request of iDeCK has been issuing the orders from time to time converting the financial assistance sanctioned to iDeCK as interest free loan repayable after 50/30 years. After detailed examination, it is noticed that the budget provided was under the capital head of account which was drawn on different occasions and passed on the iDeCK, which has been subsequently treated as interest free loan repayable after 50/30 years. A sum of Rs. 37.00 crores is released to iDeCK since its inception through different Government orders to meet the project development and project investment expenditure. In order to ensure that the expenditure is properly accounted under capital and loan heads, the issue has been examined to consider the entire sanction and releases made to iDeCK since its inception, create a new service head under loan head and to provide a sum of Rs. 37.00 crores under SE-III, subject to effecting contra credit entries to capital head of account. Accordingly, a sum of Rs. 37.00 crores is provided under SE-III in the budget 2010-11 under the head of account 7465-00-800-0-01. Hence this order.

**Government Order No.: IDD 29 IDM 2010, Bangalore, Dated: 31-03-2011**

After examining the issue in detail, sanction is accorded to effect contra entries by a debting a sum of Rs. 37.00 crores (Rupees Thirty seven crores only) provided in SE-III of the budget 2010-11 under the head of account 7465-00-800-0-01, and crediting the same to the head of account 5465-01-901-0-00 by passing contra entries as required to enable the account general to take note of the adjustment entries while preparing financial statements for the year 2010-11.

This order issues with the concurrence of the Finance Department vide U.O. Note No. FD 1965 Exp-1/10 dated 04-02-2011.

By order and in the name of the Governor of Karnataka

**R.Shivalingaiah**

Under Secretary to Government, PPP Cell

Infrastructure Development Department.

PR No. 1097

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಮಾನವ ಸಂಪನ್ಮೂಲ ಸೇವೆಗಳನ್ನು ಒದಗಿಸುತ್ತಿರುವ ಮೆ: ಶ್ರೀ ಎಂಟರ್‌ಪ್ರೈಸಸ್, ಬೆಂಗಳೂರು ಇವರ ಗುತ್ತಿಗೆ ಅವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂ: ಆಕುಕ (ಯೋ) 44 ಡಬ್ಲ್ಯೂಬಿಎ 2009, ದಿ: 28–02–2009.
2) **ದಿನಾಂಕ 05**–02–2009 ರಂದು ನಡೆದ 17ನೇ ಕಾರ್ಯಕ್ರಮ ಚಾಲನಾ ಸಮಿತಿ ಸಭೆಯ ನಡವಳಿಗಳು.
3) ದಿನಾಂಕ 10–02–2011 ರಂದು ನಡೆದ 24ನೇ ಕಾರ್ಯಕ್ರಮ ಚಾಲನಾ ಸಮಿತಿ ಸಭೆಯ ನಡವಳಿಗಳು.
4) ವಿಶ್ವಬ್ಯಾಂಕ್‌ರವರ ಇ–ಮೇಲ್ ಸಂದೇಶ, ದಿನಾಂಕ 06–09–2010.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಆದೇಶದನ್ವಯ ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯ ಕೇಂದ್ರ ಕಛೇರಿಯಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸಲು ಮಾನವ ಸಂಪನ್ಮೂಲ ಸೇವೆಗಳನ್ನು ಮೆ: ಶ್ರೀ ಎಂಟರ್‌ಪ್ರೈಸಸ್, ಬೆಂಗಳೂರು ಸಂಸ್ಥೆಯವತಿಯಿಂದ ಪಡೆಯುತ್ತಿದ್ದು, ಸದರಿ ಸಂಸ್ಥೆಯ ಕರಾರು ಅವಧಿಯನ್ನು ದಿನಾಂಕ 01–11–2008 ರಿಂದ ದಿನಾಂಕ 31–10–2009 ರವರೆಗೆ ಒಂದು ವರ್ಷ ಮುಂದುವರೆಸಲಾಗಿದ್ದು, ಮೇಲೆ (2) ರಲ್ಲಿ ಓದಲಾದ ನಡವಳಿಯನ್ವಯ ಕರಾರು ಅವಧಿಯನ್ನು ಮತ್ತೊಂದು ವರ್ಷ ಅಂದರೆ ದಿನಾಂಕ 01–11–2009 ರಿಂದ ದಿನಾಂಕ 31–10–2010 ರವರೆಗೆ ಮುಂದುವರೆಸಲಾಗಿದೆ. ಸದರಿ ಸಂಸ್ಥೆಯ ಗುತ್ತಿಗೆ ಅವಧಿಯು ದಿನಾಂಕ 31–10–2010ಕ್ಕೆ ಮುಕ್ತಾಯವಾಗಿರುತ್ತದೆ.

ಮೇಲ್ಕಂಡ ಸಂಸ್ಥೆಯ ಕರಾರು ಅವಧಿಯನ್ನು ಮತ್ತೊಂದು ವರ್ಷ ಮುಂದುವರೆಸುವ ಬಗ್ಗೆ ದಿನಾಂಕ 10–02–2011 ರಂದು ನಡೆದ ಯೋಜನೆಯ ಕಾರ್ಯಕ್ರಮ ಚಾಲನಾ ಸಮಿತಿಯ 24ನೇ ಸಭೆಯಲ್ಲಿ ಪ್ರಸ್ತಾಪಿಸಿದ್ದು, ವಿಶ್ವಬ್ಯಾಂಕ್‌ನ ನಿರಾಕ್ಷೇಪಣೆಗೆ ಒಳಪಟ್ಟು ಮೇಲೆ (3)ರಲ್ಲಿ ಓದಲಾದ ನಡವಳಿಯನ್ವಯ ಸಮಿತಿಯು ಸದರಿ ಪ್ರಸ್ತಾವನೆಗೆ ಅನುಮೋದನೆ ನೀಡಿದೆ. ಮೇಲೆ (4)ರಲ್ಲಿ ಓದಲಾದ ಸಂದೇಶದಲ್ಲಿ, ವಿಶ್ವಬ್ಯಾಂಕ್ ಸದರಿ ಪ್ರಸ್ತಾವನೆಗೆ ತನ್ನ ನಿರಾಕ್ಷೇಪಣೆ ತಿಳಿಸಿರುತ್ತದೆ.

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ (ಯೋ) 44 ಡಬ್ಲ್ಯೂಬಿಎ 2009, ಬೆಂಗಳೂರು, ದಿನಾಂಕ : 01–04–2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯ ಕೇಂದ್ರ ಕಛೇರಿಯಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸಲು ಮಾನವ ಸಂಪನ್ಮೂಲ ಸೇವೆಗಳನ್ನು ಒದಗಿಸುತ್ತಿರುವ ಮೆ: ಶ್ರೀ ಎಂಟರ್‌ಪ್ರೈಸಸ್, ಬೆಂಗಳೂರು ಇವರ ಗುತ್ತಿಗೆ ಅವಧಿಯನ್ನು ದಿನಾಂಕ 01–11–2010 ರಿಂದ 31–10–2011 ರವರೆಗೆ ಮುಂದುವರೆಸಲಾಗಿದೆ.

ಸದರಿಯವರು ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯೊಂದಿಗೆ ಹಿಂದಿನಂತೆ ಗುತ್ತಿಗೆ ನೇಮಕದ ಷರತ್ತು ಮತ್ತು ನಿಬಂಧನೆಗಳನ್ನೊಳಗೊಂಡ (Terms of Reference) ಕರಾರು ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "22010–06–800–0–84–051" (ಸಾಮಾನ್ಯ ವೆಚ್ಚ)" ದಡಿಯಲ್ಲಿ ಅಯಾ ಅರ್ಥಿಕ ವರ್ಷದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಶಶಿಧರ್**

ಸರ್ಕಾರದ ಉಪ ಕಾರ್ಯದರ್ಶಿ, ಕೆಹೆಚ್‌ಎಸ್‌ಡಿಆರ್‌ಪಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

ಪಿ.ಆರ್. 1162

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ ಮತ್ತು ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಗಳು ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನಿಂದ ರಾಜ್ಯ ಸರ್ಕಾರದ ಖಾತರಿ ಮೇಲೆ ಪಡೆದಿರುವ ಸಾಲವನ್ನು ಬ್ಯಾಂಕಿಗೆ ಮರುಪಾವತಿಸಿರುವುದಕ್ಕೆ ಲೆಕ್ಕ ಹೊಂದಾಣಿಕೆ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** ಸಂಖ್ಯೆ ವಾಕೈ 94 ಸಸಕಾ 2008 ದಿನಾಂಕ 24–03–2011ರ ಸರ್ಕಾರದ ಆದೇಶ.

**ಪ್ರಸ್ತಾವನೆ :**

ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ ಮತ್ತು ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆ ನಿಯಮಿತ, ಈ ಸಂಘಗಳು ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನಿಂದ ಸರ್ಕಾರದ ಖಾತರಿ ಮೇಲೆ ಪಡೆದಿರುವ ಸಾಲಗಳನ್ನು ಮರುಪಾವತಿಸದೇ ಇರುವುದರಿಂದ ಮತ್ತು ಅಪೆಕ್ಸ್ ಬ್ಯಾಂಕ್ ಸರ್ಕಾರದ ಖಾತರಿಯನ್ನು ಇನ್‌ವೋಕ್ ಮಾಡಿರುವುದರಿಂದ, ಈ ಮೂರು ಕಾರ್ಖಾನೆಗಳು ದಿನಾಂಕ 31–01–2011 ರ ಅಂತ್ಯಕ್ಕೆ ಬ್ಯಾಂಕಿಗೆ ಪಾವತಿಸಲು ಬಾಕಿಯಿರುವ ಅಸಲು ಮತ್ತು ಬಡ್ಡಿಯನ್ನು ಅಪೆಕ್ಸ್ ಬ್ಯಾಂಕಿಗೆ ಪಾವತಿಸುವ ಸಲುವಾಗಿ ಒಟ್ಟು ರೂ. 2483.44 ಲಕ್ಷಗಳನ್ನು 2010–2011ನೇ ಸಾಲಿನ ಪೂರಕ ಅಂದಾಜುಗಳು – III ರಲ್ಲಿ ಈ ಕೆಳಕಂಡಂತೆ ತಿಳಿಸಿರುವ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಒದಗಿಸಿದ್ದು ಈ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿಯಮಿತಕ್ಕೆ ಪಾವತಿಸಲು ಮೇಲೆ ಓದಲಾದ (1) ರಲ್ಲಿ ಆದೇಶಿಸಲಾಗಿದೆ.

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಕಾರ್ಖಾನೆ ಹೆಸರು | ಅಸಲು | ಬಡ್ಡಿ (ಶೇ. 6.5 ರಂತೆ) | ಒಟ್ಟು | ಲೆಕ್ಕ ಶೀರ್ಷಿಕೆ |
|---|---|---|---|---|---|
| 1 | ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆ | 447.05 | 174.43 | 621.48 | 6860–04–101–0–03 |
| 2 | ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ | 904.01 | 323.59 | 1227.60 | 6425–00–108–5–07 |
| 3 | ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ | 523.59 | 110.77 | 634.36 | 6860–04–101–0–10 |
| | ಒಟ್ಟು | 1874.65 | 608.79 | 2483.44 | |

ಮೇಲ್ಕಂಡ ಮೊತ್ತಗಳನ್ನು ಕಾರ್ಖಾನೆಗಳ ಪರವಾಗಿ ಅಪೆಕ್ಸ್ ಬ್ಯಾಂಕಿಗೆ ಪಾವತಿಸಲು ಖರ್ಚನ್ನು ಮೊದಲಿಗೆ ವಿತ್ತೀಯ ನಿರ್ವಹಣಾ ನಿಧಿಯಿಂದ (Fiscal Management Fund) ಭರಿಸಲಾಗಿದ್ದು. ಅದರಂತೆ ಕೆಳಕಂಡಂತೆ ಲೆಕ್ಕ ಹೊಂದಾಣಿಕೆ ಆದೇಶವನ್ನು (Adjustment Order) ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಾಕೈ 94 ಸಸಕಾ 2008, ಬೆಂಗಳೂರು, ದಿನಾಂಕ : 25–04–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕ್ರಮಸಂಖ್ಯೆ: 1 ಮತ್ತು 3 ರಲ್ಲಿ ತಿಳಿಸಿರುವ ಮೊತ್ತಗಳನ್ನು ಲೆಕ್ಕ ಶೀರ್ಷಿಕೆ **"6860–04–902–0–00– ವಿತ್ತೀಯ ನಿರ್ವಹಣಾ ನಿಧಿಯಿಂದ ಭರಿಸಲ್ಪಟ್ಟ ವಜಾ"** ಅಡಿಯಲ್ಲಿ ವ್ಯಯ ನಮೂದು ಎಂದು ಪರಿಗಣಿಸುವುದು ಮತ್ತು ಕ್ರಮಸಂಖ್ಯೆ : 2 ರಲ್ಲಿ ತಿಳಿಸಿರುವ ಮೊತ್ತವನ್ನು ಲೆಕ್ಕ ಶೀರ್ಷಿಕೆ **"6425–00–902–0–00– ವಿತ್ತೀಯ ನಿರ್ವಹಣಾ ನಿಧಿಯಿಂದ ಭರಿಸಲ್ಪಟ್ಟ ವಜಾ"** ಅಡಿಯಲ್ಲಿ ವ್ಯಯ ನಮೂದು ಎಂದು ಪರಿಗಣಿಸುವುದು. (The amount in respect of Sl. No. 1 and 3 should be deducted under the Head of Account "6860-04-902-0-00 Deduct amount met from fiscal Mangement Fund" and in respect of Sl No. 2, under the Head of Accout " 6425-00-902-0-00 deduct amount met from Fiscal Mangement Fund"). ಈ ಸಾಲಿನ ಲೆಕ್ಕಗಳನ್ನು ಮುಕ್ತಾಯಗೊಳಿಸುವ ಮುನ್ನ ಪ್ರಧಾನ ಮಹಾಲೇಖಾಪಾಲರು (ಎ ಮತ್ತು ಇ) ತಮ್ಮ ಪುಸ್ತಕಗಳಲ್ಲಿ ಮೇಲ್ಕಂಡ ಸೂಕ್ತ ಹೊಂದಾಣಿಕೆಗಳನ್ನು ಮಾಡಿಕೊಳ್ಳುವುದು.

ಈ ಆದೇಶವನ್ನು ದಿನಾಂಕ 5–2–2011 ರ ಎಫ್‌ಡಿ 476 ವೆಚ್ಚ –2/2010ರ ಅನಧಿಕೃತ ಟಿಪ್ಪಣಿ ಮತ್ತು ದಿನಾಂಕ 24–03–2011 ರ ಆಇ 476 ವೆಚ್ಚ –2/10ರಲ್ಲಿ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಮೂಲಕ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ರಾಮಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1163 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸಹಕಾರಿ ಸಕ್ಕರೆ)

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ :** ದಿನಾಂಕ : 01–06–1987 ರಿಂದ ಡಿಸೆಂಬರ್ 1996 ರವರೆಗೆ ಪ್ರಾರಂಭವಾಗಿರುವ ಖಾಸಗಿ ಶಿಕ್ಷಣ ಮಹಾವಿದ್ಯಾಲಯಗಳನ್ನು ವೇತನಾನುದಾನಕ್ಕೊಳಪಡಿಸುವ ಬಗ್ಗೆ.

**ಓದಲಾಗಿದೆ :** ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ನಿರ್ದೇಶನಾಲಯದ ಪತ್ರಗಳು ಸಂ. ಶಿತ3 . ಇತರೆ ಅನುದಾನ 02/2004–05, ದಿನಾಂಕ: 31–12–2010 ಮತ್ತು ದಿನಾಂಕ: 04–11–2011

**ಪ್ರಸ್ತಾವನೆ :**

1. ಕರ್ನಾಟಕ ರಾಜ್ಯದಲ್ಲಿ ದಿನಾಂಕ : 01–06–1987 ರಿಂದ ಡಿಸೆಂಬರ್ 1996ರವರೆಗೆ ಪ್ರಾರಂಭವಾಗಿರುವ ಖಾಸಗಿ ಶಿಕ್ಷಣ ಮಹಾವಿದ್ಯಾಲಯಗಳನ್ನು (ಬಿ.ಇಡಿ. ಕಾಲೇಜುಗಳನ್ನು) ವೇತನಾನುದಾನಕ್ಕೊಳಪಡಿಸಲು ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾಗಿರುವ ಪತ್ರದ ಮೂಲಕ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

2. ಈ ಮೊದಲು ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ ಇವರು 01–06–1987 ಕ್ಕಿಂತ ಮುಂಚಿತವಾಗಿ ಪ್ರಾರಂಭವಾದ 28 ಅನುದಾನರಹಿತ ಶಿಕ್ಷಣ ಮಹಾವಿದ್ಯಾಲಯಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಸದರಿ

ಪ್ರಸ್ತಾವನೆಯನ್ನು ಪರಿಶೀಲಿಸಿ, ಸಚಿವ ಸಂಪುಟದ ಅನುಮೋದನೆಗಾಗಿ ಮಂಡಿಸಿದ್ದು, ಸಚಿವ ಸಂಪುಟವು ಈ ಶಿಕ್ಷಣ ಮಹಾವಿದ್ಯಾಲಯಗಳಲ್ಲಿ 21 ಶಿಕ್ಷಣ ಮಹಾವಿದ್ಯಾಲಯಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಅನುಮೋದನೆ ನೀಡಿದೆ. ಸದರಿ 21 ಶಿಕ್ಷಣ ಮಹಾವಿದ್ಯಾಲಯಗಳನ್ನು ವೇತನಾನುದಾನಕ್ಕೊಳಪಡಿಸಿ, ದಿನಾಂಕ: 19-05-2009 ರಂದು ಸರ್ಕಾರದ ಆದೇಶವನ್ನು ಹೊರಡಿಸಲಾಗಿದೆ.

3. ನಂತರ, ದಿನಾಂಕ: 01-06-1987 ರಿಂದ ಡಿಸೆಂಬರ್ 1996 ರವರೆಗಿನ ಅವಧಿಯಲ್ಲಿ ಪ್ರಾರಂಭವಾಗಿರುವ ಶಿಕ್ಷಣ ಮಹಾವಿದ್ಯಾಲಯಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಬಗ್ಗೆ ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ ಇವರು ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ. ಸದರಿ ಪ್ರಸ್ತಾವನೆಗಳಲ್ಲಿ ಈ ಕೆಳಕಂಡ ಶಿಕ್ಷಣ ಮಹಾವಿದ್ಯಾಲಯಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಪ್ರಸ್ತಾಪಿಸಲಾಗಿದೆ.

| ಕ್ರ.ಸಂ. | ಜಿಲ್ಲೆ | ಕಾಲೇಜಿನ ಹೆಸರು | ಕಾಲೇಜು ಪ್ರಾರಂಭವಾದ ದಿನಾಂಕ |
|---|---|---|---|
| 1 | ಬೆಂಗಳೂರು | ಎಸ್.ಜೆ.ಇ.ಎಸ್. ಶಿಕ್ಷಣ ಮಹಾವಿದ್ಯಾಲಯ | 09-08-1987 |
| 2 | ಬೆಂಗಳೂರು | ಆಲ್ ಅಮೀನ್ ಶಿಕ್ಷಣ ಮಹಾವಿದ್ಯಾಲಯ | 11-04-1990 |
| 3 | ಶಿವಮೊಗ್ಗ | ಕುಮದ್ವತಿ ಶಿಕ್ಷಣ ಮಹಾವಿದ್ಯಾಲಯ | 27-08-1996 |
| 4 | ಮೈಸೂರು | ಕಾಗಿನೆಲೆ ಶಿಕ್ಷಣ ಮಹಾವಿದ್ಯಾಲಯ | 26-11-1996 |

4. ಅಂತೆಯೆ, ವಿಜಯನಗರ ಶಿಕ್ಷಣ ಮಹಾವಿದ್ಯಾಲಯ, ಹುಬ್ಬಳ್ಳಿ, ಈ ಕಾಲೇಜನ್ನು ವೇತನಾನುದಾನಕ್ಕೆ ಒಳಪಡಿಸುವ ಬಗ್ಗೆ ಪ್ರತ್ಯೇಕವಾಗಿ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಯ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಹಾಗೆಯೇ, ಮೇಲ್ಕಂಡ ಪಟ್ಟಿಯ ಕ್ರಮ ಸಂಖ್ಯೆ 01 ರಲ್ಲಿರುವ ಎಸ್.ಜೆ.ಇ.ಎಸ್. ಶಿಕ್ಷಣ ಮಹಾವಿದ್ಯಾಲಯ ಬೆಂಗಳೂರು ಇವರು ತಮ್ಮ ಕಾಲೇಜನ್ನು ವೇತನಾನುದಾನಕ್ಕೆ ಒಳಪಡಿಸುವ ಬಗ್ಗೆ ಇಚ್ಛೆ ವ್ಯಕ್ತಪಡಿಸಿರುವುದಿಲ್ಲವೆಂದು ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ ಇವರು ತಿಳಿಸಿರುತ್ತಾರೆ.

5. ಅಲ್ಲದೇ ಈ ಕೆಳಕಂಡ ಎರಡು ಶಿಕ್ಷಣ ಮಹಾವಿದ್ಯಾಲಯಗಳನ್ನು ಪ್ರತ್ಯೇಕವಾಗಿ ಪರಿಶೀಲಿಸಿ, ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿತ್ತು. ಆರ್ಥಿಕ ಇಲಾಖೆಯು ಈ ಶಿಕ್ಷಣ ಮಹಾವಿದ್ಯಾಲಯಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಬಗ್ಗೆ ಆರ್ಥಿಕ ಮಿತವ್ಯಯದ ಆದೇಶದ ಹಿನ್ನೆಲೆಯಲ್ಲಿ ಯಾವುದೇ ಶಿಕ್ಷಣ ಮಹಾವಿದ್ಯಾಲಯಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಅವಕಾಶವಿಲ್ಲವೆಂದು ತಿಳಿಸುತ್ತಾ, ಅಗತ್ಯ ಮಾಹಿತಿಗಳೊಂದಿಗೆ ಸೂಕ್ತ ಸಮಯದಲ್ಲಿ ಅನುದಾನದ ಲಭ್ಯತೆಯನ್ನು ಆಧರಿಸಿ ಪ್ರಸ್ತಾವನೆಗಳನ್ನು ಮತ್ತೆ ಸಲ್ಲಿಸಲು ಸೂಚಿಸಿರುತ್ತದೆ. ಆ ಪ್ರಕಾರ ಈ ಕೆಳಕಂಡ ಕಾಲೇಜುಗಳ ಪ್ರಸ್ತಾವನೆಗಳನ್ನು ಸಚಿವ ಸಂಪುಟದ ಅನುಮೋದನೆಗಾಗಿ ಸಲ್ಲಿಸಲಾಗಿತ್ತು.

| ಕ್ರ.ಸಂ. | ಕಾಲೇಜಿನ ಹೆಸರು | ಕಾಲೇಜು ಪ್ರಾರಂಭವಾದ ದಿನಾಂಕ |
|---|---|---|
| 1. | ಬಿ.ಇ.ಎ. ಶಿಕ್ಷಣ ಮಹಾವಿದ್ಯಾಲಯ, ದಾವಣಗೆರೆ | 22-09-1980 |
| 2. | ಜೆ.ಎಸ್.ಎಸ್. ಶಿಕ್ಷಣ ಮಹಾವಿದ್ಯಾಲಯ, ಸಕಲೇಶಪುರ, ಹಾಸನ | 21-08-1986 |

6. ಮೇಲ್ಕಂಡ ಶಿಕ್ಷಣ ಮಹಾವಿದ್ಯಾಲಯಗಳಿಗೆ ಸಂಭಂದಪಟ್ಟಂತೆ ಪ್ರತಿ ಕಾಲೇಜಿಗೆ ವಾರ್ಷಿಕವಾಗಿ ಶಿಕ್ಷಕರ ವೇತನಾನುದಾನಕ್ಕಾಗಿ ರೂ. 46,80,276ಗಳು ಮತ್ತು ಶಿಕ್ಷಕೇತರ ಸಿಬ್ಬಂದಿಗಾಗಿ ರೂ. 42,09,168/- ಗಳು ಬೇಕಾಗುತ್ತದೆ ಎಂದು ತಿಳಿಸಿದ್ದು, ಒಟ್ಟು ರೂ. 88,89,444/- ಗಳು ಬೇಕಾಗುತ್ತದೆ ಎಂದು ಅಂದಾಜಿಸಲಾಗಿದೆ.

7. ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಯು ಸಲ್ಲಿಸಿದ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ದಿನಾಂಕ: 01-06-1987 ಕ್ಕಿಂತ ಪೂರ್ವದಲ್ಲಿ ಪ್ರಾರಂಭವಾಗಿ ವೇತನಾನುದಾಕ್ಕೊಳಪಡಿಸದೆ ಬಾಕಿ ಉಳಿದಿರುವ ಮೇಲ್ಕಂಡ ಎರಡು ಕಾಲೇಜುಗಳು ಹಾಗೂ ದಿನಾಂಕ: 01-06-1987 ರಿಂದ ಡಿಸೆಂಬರ್ 1996ನೇ ಸಾಲಿನವರೆಗೆ ಪ್ರಾರಂಭಿಸಲಾದ ನಾಲ್ಕು ಶಿಕ್ಷಣ ಮಹಾವಿದ್ಯಾಲಯಗಳು ಸೇರಿದಂತೆ ಒಟ್ಟು ಆರು ಶಿಕ್ಷಣ ಮಹಾವಿದ್ಯಾಲಯಗಳನ್ನು ವೇತನಾನುದಾನಕ್ಕೆ ಒಳಪಡಿಸಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 295 ಯುಎನ್‌ಇ 2010, ಬೆಂಗಳೂರು, ದಿನಾಂಕ : 13-04-2011**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಅನುದಾನ ಸಂಹಿತೆ (ಜಿಐಎ) ನಿಯಮಾವಳಿಗಳಿಗೆ ಸೂಕ್ತ ತಿದ್ದುಪಡಿ ತರುವ ಷರತ್ತುಗೊಳಪಡಿಸಿ, ದಿನಾಂಕ 01-06-1987ರ ಪೂರ್ವದಲ್ಲಿ ಪ್ರಾರಂಭಿಸಲಾಗಿರುವ ಮತ್ತು ದಿನಾಂಕ 01-06-1987 ರಿಂದ ಡಿಸೆಂಬರ್ 1996ರ ಅವಧಿಯಲ್ಲಿ ಪ್ರಾರಂಭಿಸಿ, ಸತತವಾಗಿ ನಡೆಯುತ್ತಿರುವ ಈ ಕೆಳಕಂಡ ಶಿಕ್ಷಣ ಮಹಾವಿದ್ಯಾಲಯಗಳನ್ನು ಕೆಳಕಂಡ ಷರತ್ತು/ನಿಬಂಧನೆಗೊಳಪಟ್ಟು ವೇತನಾನುದಾನಕ್ಕೆ ಒಳಪಡಿಸಲು ಆದೇಶಿಸಿದೆ.

| ಕ್ರಮ ಸಂಖ್ಯೆ | ಶಿಕ್ಷಣ ಮಹಾವಿದ್ಯಾಲಯದ ಹೆಸರು ಮತ್ತು ಸ್ಥಳ | ಕಾಲೇಜು ಪ್ರಾರಂಭವಾದ ದಿನಾಂಕ |
|---|---|---|
| 1. | ಬಿಇ.ಎ. ಶಿಕ್ಷಣ ಮಹಾವಿದ್ಯಾಲಯ, ದಾವಣಗೆರೆ, ದಾವಣಗೆರೆ ಜಿಲ್ಲೆ | 22-09-1980 |
| 2. | ಜೆ.ಎಸ್.ಎಸ್. ಶಿಕ್ಷಣ ಮಹಾವಿದ್ಯಾಲಯ, ಸಕಲೇಶಪುರ, ಹಾಸನ ಜಿಲ್ಲೆ | 21-08-1986 |
| 3. | ವಿಜಯನಗರ ಶಿಕ್ಷಣ ಮಹಾವಿದ್ಯಾಲಯ, ಹುಬ್ಬಳ್ಳಿ, ಧಾರವಾಡ ಜಿಲ್ಲೆ | 05-09-1987 |
| 4. | ಅಲ್ ಅಮೀನ್ ಶಿಕ್ಷಣ ಮಹಾವಿದ್ಯಾಲಯ, ಬೆಂಗಳೂರು | 11-04-1990 |
| 5. | ಕುಮುದ್ವತಿ ಶಿಕ್ಷಣ ಮಹಾವಿದ್ಯಾಲಯ, ಶಿಕಾರಿಪುರ, ಶಿವಮೊಗ್ಗ ಜಿಲ್ಲೆ | 27-08-1996 |
| 6. | ಕಾಗಿನೆಲೆ ಶಿಕ್ಷಣ ಮಹಾವಿದ್ಯಾಲಯ,, ಮೈಸೂರು, ಮೈಸೂರು ಜಿಲ್ಲೆ | 26-11-1996 |

**ಷರತ್ತು/ನಿಬಂಧನೆಗಳು**

1. ಪ್ರಸ್ತುತ ಪ್ರಕರಣಗಳಲ್ಲಿ ವಿಸ್ತರಿಸಿರುವ ಅರ್ಹತಾದಾಯಕ ಅವಧಿಯನ್ನು ಯಥವತ್ತಾಗಿ, ಬೇರೆ ಯಾವುದೇ ಪ್ರಕರಣಗಳಿಗೆ ಅನ್ವಯಿಸಕೂಡದು;
2. ಅನುದಾನ ಸಂಹಿತೆ/ಎನ್‌ಸಿಟಿಇ/ಯುಜಿಸಿಯ ಮಾನದಂಡಗಳ ಪ್ರಕಾರ ಅಗತ್ಯ ಶೈಕ್ಷಣಿಕ ಮತ್ತು ಮೂಲಭೂತ ಸೌಲಭ್ಯಗಳನ್ನು ಹೊಂದಿರಬೇಕು.
3. ಅನುದಾನ ಸಂಹಿತೆ/ಎನ್‌ಸಿಟಿಇ/ಯುಜಿಸಿಯ ಮಾನದಂಡಗಳ ಪ್ರಕಾರ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ವರ್ಗೀಕರಿಸಿ ನಿಗದಿಪಡಿಸಿರಬೇಕು.
4. ಕರ್ನಾಟಕ ರಾಜ್ಯ ಸರ್ಕಾರದ ಶಿಕ್ಷಣ ಇಲಾಖೆಯ/ಎನ್‌ಸಿಟಿಇ/ಯುಜಿಸಿಯ ಕಾಲಕಾಲಕ್ಕೆ ಜಾರಿಯಲ್ಲಿರುವ ನೇಮಕಾತಿ ನಿಯಮಗಳ ಪ್ರಕಾರ ಹುದ್ದೆಗಳ ವಿದ್ಯಾರ್ಹತೆ, ವಯೋಮಿತಿ ಹಾಗೂ ಇತರ ಶೈಕ್ಷಣಿಕ ಅರ್ಹತೆಗಳನ್ನು ನಿಗದಿಪಡಿಸಿ, ಅವುಗಳನ್ನು ಪಾಲಿಸಿರಬೇಕು.
5. ಹುದ್ದೆಗಳನ್ನು ಭರ್ತಿ ಮಾಡುವ ಮುನ್ನ ಸಂಬಂಧಿಸಿದ ಪ್ರಾಧಿಕಾರದಿಂದ ಪೂರ್ವಾನುಮತಿ ಪಡೆದಿರಬೇಕು, ಅನುಮೋದನೆ ಪಡೆಯದೇ ಇರುವ ಅರ್ಹ ಹುದ್ದೆಗಳನ್ನು ವೇತನಾನುದಾನ ಸಹಿತ ಅನುಮೋದನೆಯನ್ನು ಪಡೆಯತಕ್ಕದ್ದು.
6. ಮೀಸಲಾತಿಗೆ ಸಂಬಂಧಿಸಿದಂತೆ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿಗಳನ್ನು/ ಆದೇಶಗಳನ್ನು ತಪ್ಪದೇ ಪಾಲಿಸಿರಬೇಕು.
7. ಪ್ರಸ್ತಾಪಿತ ಕಾಲೇಜಿಗಳಿಗೆ ಸಂಬಂಧಿಸಿದಂತೆ ನ್ಯಾಯಾಲಯದಲ್ಲಿ ಯಾವುದೇ ವಿವಾದ ಇರುವುದಿಲ್ಲ ಎಂಬುದನ್ನು ದೃಢಪಡಿಸಿಕೊಂಡ ನಂತರವೇ ವೇತನ ಅನುದಾನಕ್ಕೊಳಪಡಿಸುವುದು.
8. ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ ಇವರು ಈ ಮೇಲಿನ ಷರತ್ತು/ನಿಬಂದನೆಗಳನ್ನು ಸಂಬಂಧಿಸಿದ ಕಾಲೇಜುಗಳು ಪಾಲಿಸಿವೆಯೇ ಎಂಬ ಅಂಶಗಳನ್ನು ದೃಢಪಡಿಸಿಕೊಂಡು ಸರ್ಕಾರಕ್ಕೆ ಕಾಲೇಜುವಾರು ವರದಿಯನ್ನು ಸಲ್ಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂ. ಆಇ 55ವೆಚ್ಚ–8/2011 , ದಿನಾಂಕ: 17–01–2011 ರಲ್ಲಿ ಹಾಗೂ ದಿನಾಂಕ: 25 – 01–2011ರ ಅನದಿಕೃತ ಟಿಪ್ಪಣಿಯಲ್ಲಿ ಮತ್ತು ಟಿಪ್ಪಣಿ ಸಂ ಆಇ 313 ವೆಚ್ಚ–8/2011 ದಿನಾಂಕ: 29–03–2011 ರಲ್ಲಿ ನೀಡಿರುವ ಅಭಿಪ್ರಾಯ/ಸಹಮತಿಗಳನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು.ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1164 ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಎಸ್.ಆರ್. ಅಮಾನುಲ್ಲಾ ಷರೀಫ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರ ವಿರುದ್ಧ ದಾಖಲಾದ 'ಅಕ್ರಮ ಆಸ್ತಿ ಹೊಂದಿರುವ' ಪ್ರಕರಣದ ಅಭಿಯೋಜನಾ ಆದೇಶ ಕುರಿತು.

**ಓದಲಾಗಿದೆ :**
1) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್ /ಐಎನ್‌ವಿ(ಜಿ) /ಎಂ–22/ ಸಿಆರ್–9/2008/ಮೈಸೂರು ದಿನಾಂಕ 28–01–2011.
2) ತನಿಖಾಧಿಕಾರಿಯವರ ಅಂತಿಮ ವರದಿ ದಿನಾಂಕ 13–01–2011.
3) ತನಿಖಾ ದಾಖಲೆಗಳಾದ ಪ್ರಥಮ ವರ್ತಮಾನ ವರದಿ, ಶೋಧನಾ ಪಂಚನಾಮೆಗಳು, ಸಾಕ್ಷಿದಾರರ ಹೇಳಿಕೆಗಳು ಮತ್ತು ತನಿಖಾಧಿಕಾರಿಯ ಅಂತಿಮ ವರದಿಯ ಕಡತಗಳು.

**ಪ್ರಸ್ತಾವನೆ :**

ಶ್ರೀ ಎಸ್.ಆರ್. ಅಮಾನುಲ್ಲಾ ಷರೀಫ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರ ವಿರುದ್ಧ ಗುನ್ನೆ ಸಂಖ್ಯೆ: 09/2008 ರಲ್ಲಿ ಆರಕ್ಷಕ ಅಧೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮೈಸೂರು, ಇಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯವರ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಪತ್ರ ದಿನಾಂಕ: 28–01–2011 ರೊಡನೆ ಕಳುಹಿಸುತ್ತಾ, ಆಪಾದಿತ ಅಧಿಕಾರಿಯವರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಮಂಜೂರಾತಿಗಾಗಿ ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ) ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: (1)ರ ಪತ್ರದೊಡನೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

I) ಪ್ರಥಮ ವರ್ತಮಾನ ವರದಿ ದಿನಾಂಕ: 26–06–2008.

II) ಶೋಧನಾ ಪಂಚನಾಮೆ
1) ಮನೆ ನಂ. 47, 1ನೇ ಕ್ರಾಸ್, ಸುಭಾಷ್ ನಗರ ಎನ್.ಆರ್. ಮೊಹಲ್ಲ, ಮೈಸೂರು, ದಿನಾಂಕ: 27–06–2008.
2) ಮನೆ ನಂ. 5, ಹೆಚ್.ಐ.ಜಿ. ಷರೀಫ್ ಮ್ಯಾನಷನ್ ಟಿಪ್ಪು ಸರ್ಕಲ್ ಹತ್ತಿರ , ಬಡಾಮಕಾನ್ ಲೇಔಟ್, ಸುಭಾಷ್ ನಗರ, ಮೈಸೂರು ದಿನಾಂಕ: 27–06–2008
3) ಮನೆ ನಂ. 194/1, 7ನೇ ಕ್ರಾಸ್, ಸುಭಾಷ್ ನಗರ ಎನ್.ಆರ್. ಮೊಹಲ್ಲ, ಮೈಸೂರು, ದಿನಾಂಕ: 27–06–2008.

4) ಮನೆ ನಂ. 194/1–ಎ, "ಬೈತುಲ್ಲಾ ಅಸಾದ್" 7ನೇ ಕ್ರಾಸ್ ಸುಭಾಷ್ ನಗರ ಎನ್.ಆರ್. ಮೊಹಲ್ಲ, ಮೈಸೂರು, ದಿನಾಂಕ: 27–06–2008.

III) ತನಿಖಾಧಿಕಾರಿಯ ಅಂತಿಮ ವರದಿ ದಿನಾಂಕ: 13–01–2011.

IV) ತನಿಖೆಯ ಅಂತಿಮ ವರದಿಯ ಕಡತ.

**ಪಂಚ ಸಾಕ್ಷಿದಾರರು:–**

1) ಶ್ರೀ ಎಂ. ಕುಮಾರ್, ಪ್ರಥಮ ದರ್ಜೆ ಸಹಾಯಕ.
2) ಶ್ರೀಮತಿ ಲಕ್ಷ್ಮೀ, ದ್ವಿತೀಯ ದರ್ಜೆ ಸಹಾಯಕರು.
3) ಶ್ರೀಮತಿ ಜಯಶ್ರೀ, ದ್ವಿತೀಯ ದರ್ಜೆ ಸಹಾಯಕರು.
4) ಶ್ರೀ ಹೆಚ್.ವಿ. ನಾಗೇಶ್, ದ್ವಿತೀಯ ದರ್ಜೆ ಸಹಾಯಕರು.
5) ಶ್ರೀಮತಿ ಹೆಚ್.ವಿ. ಕವಿತಾ, ದ್ವಿತೀಯ ದರ್ಜೆ ಸಹಾಯಕರು.
6) ಶ್ರೀ ವಿ. ವೆಂಕಟರಾಜು, ದ್ವಿತೀಯ ದರ್ಜೆ ಸಹಾಯಕರು.
7) ಶ್ರೀ ಕೆ.ಎ. ಪ್ರದೀಪ್, ದ್ವಿತೀಯ ದರ್ಜೆ ಸಹಾಯಕರು.
8) ಶ್ರೀಮತಿ ಸಿ.ಶಕುಂತಲ, ದ್ವಿತೀಯ ದರ್ಜೆ ಸಹಾಯಕರು.

**ಪರಿಶೀಲನಾ ಅವಧಿ ದಿನಾಂಕ: 14–11–1991 ರಿಂದ 27–06–2008 ರವರೆಗೆ ರಲ್ಲಿ**
**ಆರೋಪಿತರು ಮತ್ತು ಅವರ ಕುಟುಂಬ ವರ್ಗದವರ ಹೆಸರಿನಲ್ಲಿರುವ ಆಸ್ತಿಯ ವಿವರಗಳು**
**(ಪ್ರಥಮ ವರ್ತಮಾನ ವರದಿಯ ಪ್ರಕಾರ)**

| ಕ್ರ. ಸಂ. | ವಿವರ | **ಮೊತ್ತ ರೂ. ಗಳಲ್ಲಿ** | **ಆಸ್ತಿಯು ಯಾರ ಹೆಸರಿನಲ್ಲಿದೆ.** |
|---|---|---|---|
| 1. | ಮನೆ ನಂ. 47, 1ನೇ ಕ್ರಾಸ್, ಸುಭಾಷ್ ನಗರ ಎನ್.ಆರ್. ಮೊಹಲ್ಲ, ಮೈಸೂರು. | **50,00,000–00** | ಆರೋಪಿ ಶ್ರೀ ಎಸ್.ಆರ್. ಅಮಾನುಲ್ಲಾ ಷರೀಫ್ |
| **2.** | ಮನೆ ನಂ. 194/1, 7ನೇ ಕ್ರಾಸ್, ಸುಭಾಷ್ ನಗರ ಎನ್.ಆರ್. ಮೊಹಲ್ಲ, ಮೈಸೂರು | **50,00,000–00** | ಆರೋಪಿತರ ತಮ್ಮನ ಹೆಸರಿನಲ್ಲಿ |
| **3.** | ಮನೆ ನಂ. 194/1–ಎ, "ಬೈತುಲ್ಲಾ ಅಸಾದ" 7ನೇ ಕ್ರಾಸ್ ಸುಭಾಷ್ ನಗರ ಎನ್.ಆರ್. ಮೊಹಲ್ಲ, ಮೈಸೂರು | **50,00,000–00** | ಆರೋಪಿತರ ತಮ್ಮನ ಹೆಸರಿನಲ್ಲಿ |
| 4. | ಮನೆ ನಂ. 5, ಹೆಚ್.ಐ.ಜಿ. ಷರೀಫ್ ಮ್ಯಾನಷನ್ ಟಿಪ್ಪು ಸರ್ಕಲ್ ಹತ್ತಿರ, ಬಡಾಮಕಾನ್ ಲೇಔಟ್, ಸುಭಾಷ್ ನಗರ, ಮೈಸೂರು | **50,00,000–00** | **ಆರೋಪಿತರ ತಾಯಿ ವಾಸವಾಗಿರುವ ಮನೆ** |
| **5** | ಮನೆ ನಂ. 667–ಬಿ ಲೇಔಟ್, ಬನ್ನಿಮಂಟಪ್ಪ, ಶಿವರಾತ್ರೀಶ್ವರ ನಗರ, ಜೆ.ಎಸ್.ಎಸ್. ಡೆಂಟಲ್ ಕಾಲೇಜು ಬಳಿ, ಮೈಸೂರು | **75,00–000–00** | **ಆರೋಪಿತರ ಪತ್ನಿಯವರ ಹೆಸರಿನಲ್ಲಿರುತ್ತದೆ.** |
| **6** | ಮನೆ ನಂ. 10, ಬಡೇಮಖಾನ್ ಬಡಾವಣೆ ಸುಭಾಷ್ ನಗರ, ಮೈಸೂರು | **40,00–000–00** | **ಆರೋಪಿತರ ತಾಯಿಯವರ ಹೆಸರಿನಲ್ಲಿ** |
| **7.** | ಆಪ್ಟೋವರ್ಲ್ಡ್ ದೇವರಾಜ ಅರಸ್ ರಸ್ತೆ, ಮೈಸೂರು | **35,00–000–00** | **ಆರೋಪಿತರ ಸಂಬಂಧಿಕರ ಹೆಸರಿನಲ್ಲಿದೆ.** |
| **8.** | ಆಪ್ಟೋಲೈನ್ ದೇವರಾಜ ಅರಸ್ ರಸ್ತೆ, ಮೈಸೂರು | **15,00,000–00** | **ಆರೋಪಿತರ ಸಂಬಂಧಿಕರ ಹೆಸರಿನಲ್ಲಿದೆ.** |
| **9.** | ಐಕಾನ್ ಕಾರ್ ನಂ. ಕೆಎ–09 ಎನ್. 1940 | **5,00,000–00** | **ಆರೋಪಿತರ ಸಂಬಂಧಿಕರ ಹೆಸರಿನಲ್ಲಿದೆ.** |
| **10.** | ಸ್ಕಾರ್ಪಿಯೋ ಕಾರ್ ನಂ. ಕೆಎ–03 ಎಂಪಿ–9369 | **7,00,000–00** | **ಆರೋಪಿತರ ಸಂಬಂಧಿಕರ ಹೆಸರಿನಲ್ಲಿದೆ.** |
| **11.** | ಮಾರುತಿ ಓಮಿನಿ ಕೆಎ–09 ಎಂ–5068 | **7,00,000–00** | **ಆರೋಪಿತರ ಸಂಬಂಧಿಕರ ಹೆಸರಿನಲ್ಲಿದೆ.** |
| **12.** | ಅಕ್ಟೀವ್ ಹೋಂಡಾ ದ್ವಿಚಕ್ರ ವಾಹನ ಕೆಎ–09 ಇಜಿ–5848 | 40,000–00 | ಆರೋಪಿತರ ಸಂಬಂಧಿಕರ ಹೆಸರಿನಲ್ಲಿದೆ. |
| **13.** | ಕೈನೆಟಿಕ್ ಹೊಂಡ ಕೆಎ–05 ಇ.ಆರ್–3969 | 40,000–00 | ಆರೋಪಿತರ ಸಂಬಂಧಿಕರ ಹೆಸರಿನಲ್ಲಿದೆ. |
| **14.** | ಕಾರು ಕೆಎ–09 ಎನ್ –8559 | 2,00,000–00 | ಆರೋಪಿತರ ಸಂಬಂಧಿಕರ ಹೆಸರಿನಲ್ಲಿದೆ. |
| **15** | ಪೀಠೋಪಕರಣಗಳು, ಎಲೆಕ್ಟ್ರಾನಿಕ್ ಮತ್ತಿತರ ಎಲೆಕ್ಟ್ರಿಕಲ್ ವಸ್ತುಗಳು, ಚಿನ್ನದ ಆಭರಣ, ಬೆಳ್ಳಿ ಆಭರಣ ಹಾಗೂ ದಿನ ಉಪಯೋಗಿಸುವ ವಸ್ತುಗಳು ಮತ್ತು ಇತರೇ ವಸ್ತುಗಳು | 15,00,000–00 | ಆರೋಪಿತರ ಮತ್ತು ಅವರ ಕುಟುಂಬದವರ ಹೆಸರಿನಲ್ಲಿದೆ. |
| | ಒಟ್ಟು ರೂ. | **3,97,30,000–00** | |

**ಆರೋಪಿತರಾದ ಶ್ರೀ ಎಸ್.ಆರ್. ಅಮಾನುಲ್ಲಾ ಷರೀಫ್ ಮತ್ತು ಅವರ ಕುಟುಂಬದವರ ಹೆಸರಿನಲ್ಲಿರುವ ಆದಾಯದ ವಿವರಗಳು**

| ಕ್ರಮ ಸಂಖ್ಯೆ | ಆದಾಯದ ಮೂಲಗಳು | ರೂ. ಗಳು |
|---|---|---|
| 1. | ಸಂಬಳದ ಆದಾಯ ಅಂದಾಜು | 30,00,000–00 |
| 2. | ಬಾಡಿಗೆ ಮತ್ತು ಇತರೇ ಆದಾಯಗಳು | 5,00,000–00 |
| | ಒಟ್ಟು ರೂ. | 35,00,000–00 |

**ಆರೋಪಿತರಾದ ಶ್ರೀ ಎಸ್.ಆರ್. ಅಮಾನುಲ್ಲಾ ಷರೀಫ್ ಮತ್ತು ಅವರ ಕುಟುಂಬದವರ ಖರ್ಚಿನ ವಿವರಗಳು**

| ಕ್ರ.ಸಂ. | ಖರ್ಚಿನ ವಿವರಗಳು | ರೂ. ಗಳಲ್ಲಿ |
|---|---|---|
| 1. | ಸಂಬಳದ ಉಳಿತಾಯ ಅಂದಾಜು (ಜಿಪಿಎಫ್, ಕೆಜಿಐಡಿ, ಎಲ್ಐ.ಸಿ, ಟ್ಯಾಕ್ಸ್, ಇತ್ಯಾದಿ) | 10,00,000–00 |
| 2. | ಕೌಟುಂಬಿಕ ನಿರ್ವಹಣೆ ವೆಚ್ಚ ಅಂದಾಜು | 10,00,000–00 |
| 3. | ಶುಭ ಸಮಾರಂಭ, ಪ್ರವಾಸ, ವಾಹನ ನಿರ್ವಹಣೆ ವೆಚ್ಚ ದೂರವಾಣಿ, ವಿದ್ಯುತ್, ನೀರು, ಇತ್ಯಾದಿ | 5,00,000–00 |
| | ಒಟ್ಟು ರೂ. | 25,00,000–00 |

**ಆರೋಪಿತರಾದ ಶ್ರೀ ಎಸ್. ಆರ್. ಅಮಾನುಲ್ಲಾ ಷರೀಫ್ ಮತ್ತು ಅವರ ಕುಟುಂಬದವರ ಆಸ್ತಿ ಖರ್ಚು ಮತ್ತು ಆದಾಯದ ವಿವರಗಳು (ಪ್ರಥಮ ವರ್ತಮಾನ ವರದಿಯ ಪ್ರಕಾರ)**

| | |
|---|---|
| ಒಟ್ಟು ಆಸ್ತಿ | 3,97,30,000–00 |
| ಒಟ್ಟು ಖರ್ಚು | 25,00,000–00 |
| ಒಟ್ಟು ಆಸ್ತಿ ಮತ್ತು ಖರ್ಚು | 4,22,30,000–00 |
| ಒಟ್ಟು ಆದಾಯ | 35,00,000–00 |
| ಒಟ್ಟು ಅಕ್ರಮ ಸಂಪಾದನೆ | 3,87,30,000–00 |

ಶ್ರೀ ಎಸ್.ಆರ್. ಅಮಾನುಲ್ಲಾ ಷರೀಫ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರು ನಿಗಧಿತ ಅದಾಯಕ್ಕಿಂತ ಹೆಚ್ಚುವರಿಯಾಗಿ ಆಸ್ತಿ ಪಾಸ್ತಿ ಹೊಂದಿರುವ ಬಗ್ಗೆ ಅವರ ವಿರುದ್ಧ ಮೈಸೂರು ಲೋಕಾಯುಕ್ತ ಠಾಣೆ ಮೊಕದ್ದಮೆ ಸಂಖ್ಯೆ: 09/2008 ರಲ್ಲಿ ದಿನಾಂಕ: 26–06–2008 ರಂದು ಕಲಂ 13(1)(ಇ) ಜೊತೆಗೆ 13(2)ರ ರೀತ್ಯ ಪ್ರಕರಣವನ್ನು ದಾಖಲು ಮಾಡಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

ಮೇಲ್ಕಂಡ ವಿವರಗಳಿಂದ ಆರೋಪಿ ಶ್ರೀ ಎಸ್. ಆರ್. ಅಮಾನುಲ್ಲಾ ಷರೀಫ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರು ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತ ಶೇ. 33.16 ರಷ್ಟು ಅಕ್ರಮ ಆಸ್ತಿ ಹೊಂದಿರುವುದು ಮತ್ತು ಖರ್ಚುಗಳನ್ನು ಮಾಡಿರುವುದು ತನಿಖೆಯಿಂದ ಕಂಡುಬಂದಿದ್ದು, ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ 13(1)(ಇ) ಜೊತೆಗೆ 13(2) ರಡಿಯಲ್ಲಿ ಅಪರಾಧವೆಸಗಿರುವುದು ಗೋಚರವಾಗಿರುತ್ತದೆ. ಆಕಾರಣ ಆರೋಪಿತರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 13 (1)(ಇ) ಜೊತೆಗೆ 13(2) ರಡಿಯಲ್ಲಿ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಸಾಕಷ್ಟು ಸಾಕ್ಷಿ ಪುರಾವೆಗಳು ಲಭ್ಯವಿರುತ್ತದೆ ಆದ್ದರಿಂದ ಆರೋಪಿ ಶ್ರೀ ಎಸ್.ಆರ್. ಅಮಾನುಲ್ಲಾ ಷರೀಫ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರು ಮೇಲ್ಕಂಡ ಕಾಯ್ದೆಯಡಿಯಲ್ಲಿ ಅಭಿಯೋಗಗೊಳಿಸಲು ಅರ್ಹರಿರುತ್ತಾರೆ.

ಆದ್ದರಿಂದ ಲಂಚ ನಿರೋಧ ಕಾಯ್ದೆ 1988ರ ಕಲಂ 13(1)(ಇ) ಜೊತೆಗೆ 13(2) ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಶ್ರೀ ಎಸ್.ಆರ್. ಅಮಾನುಲ್ಲಾ ಷರೀಫ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರನ್ವಯ ಅನುಮತಿ ನೀಡುವಂತೆ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರು ಕೋರಿರುತ್ತಾರೆ.

ಮೇಲ್ಕಂಡ ವಿವರಗಳಿಂದ ಆರೋಪಿತ ಸರ್ಕಾರಿ ಅಧಿಕಾರಿಯಾದ ಶ್ರೀ ಎಸ್.ಆರ್. ಅಮಾನುಲ್ಲಾ ಷರೀಫ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರವರು ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತ ರೂ. 33.16 ರಷ್ಟು ಅಕ್ರಮ ಆಸ್ತಿ ಹೊಂದಿರುವುದು ಮತ್ತು ಖರ್ಚುಗಳನ್ನು ಮಾಡಿರುವುದು ತನಿಖೆಯಿಂದ ಕಂಡುಬಂದಿದ್ದು, ಆರೋಪಿತರು ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ) ಸಹವಾಚನ 13(2) ರಡಿಯಲ್ಲಿ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ. ಅದಕಾರಣ, ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ) ಸಹವಾಚನಾ 13(2) ರಡಿಯಲ್ಲಿ ಶಿಕ್ಷಾರ್ಹ ಅಪರಾದಕ್ಕಾಗಿ ಅಭಿಯೋಗಗೊಳಿಸಲು ಸಾಕ್ಷಿ ಪುರಾವೆಗಳು ಲಭ್ಯವಿರುತ್ತದೆಂದು ಲೋಕಾಯುಕ್ತ ಪೊಲೀಸರು ತಿಳಿಸಿರುತ್ತಾರೆ.

ಪರಿಶೀಲನಾ ಅವಧಿಯಲ್ಲಿ ಆರೋಪಿತರ ಹೆಸರಿನಲ್ಲಿ ಮತ್ತು ಅವರ ಕುಟುಂಬದವರ ಹೆಸರಿನಲ್ಲಿ ಇರುವ ಆಸ್ತಿಗಳ ಒಟ್ಟು ಮೌಲ್ಯ ರೂ. 41,70,792/– ಗಳಾಗಿರುತ್ತದೆ. ಈ ಪರಿಶೀಲನಾ ಅವಧಿಯಲ್ಲಿ ಆರೋಪಿತರು ಮತ್ತು ಅವರ ಕುಟುಂಬದ ಸದಸ್ಯರುಗಾಗಿ ಖರ್ಚು ಮಾಡಿರುವ ಒಟ್ಟು ಹಣ ರೂ. 38,76,563/– ಗಳಾಗಿರುತ್ತದೆ. ಆಸ್ತಿಗಳ ಮತ್ತು ಖರ್ಚುಗಳ ಒಟ್ಟು ಮೊತ್ತ ರೂ. 80,47,355/– ಗಳಾಗಿದ್ದು, ಇ ಮೊತ್ತದಿಂದ ಆರೋಪಿತರ ಒಟ್ಟು ಆದಾಯದ ಮೊತ್ತ ರೂ. 60,43,348/– ಗಳನ್ನು ಕಳೆದು ಉಳಿದ ರೂ. 20,04,007/– ಗಳನ್ನು ಆರೋಪಿತರು ಆದಾಯಕ್ಕಿಂತ ಹೆಚ್ಚಿನ ಅಕ್ರಮ ಆಸ್ತಿಗಳಿಸಿರುವುದು ತನಿಖೆಯಿಂದ ದೃಢಪಟ್ಟಿರುತ್ತದೆ. ಆರೋಪಿತರು ತಮ್ಮ ಎಲ್ಲಾ ಬಲ್ಲ ಮೂಲಗಳಿಂದ ಬಂದ ಆದಾಯಕ್ಕಿಂತ ಶೇಕಡವಾರು 33.16 ರಷ್ಟು ಹೆಚ್ಚಿನ ಆಸ್ತಿಯನ್ನು ಭ್ರಷ್ಟಾಚಾರದ ಮೂಲಕ ಗಳಿಸಿರುವುದು ತನಿಖಾ ಸಮಯದಲ್ಲಿ ದೊರೆತಿರುವ ಸಾಕ್ಷ್ಯಾಧಾರಗಳ ಮೂಲಕ ದೃಢಪಟ್ಟಿರುತ್ತದೆ.

ಆರೋಪಿತರು ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ ಕಲಂ 13(1)(ಇ) ಪ್ರಕಾರ ಅಪರಾಧ ಎಸಗಿರುವುದು ಮೇಲ್ನೋಟಕ್ಕೆ ದೃಢಪಟ್ಟಿರುತ್ತದೆ. ಆರೋಪಿತರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ವಿಫುಲವಾದ ಸಾಕ್ಷಾಧಾರಗಳಿರುತ್ತದೆ. ಅದುದರಿಂದ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಇ 46 ವಾತೆತ2008, ಬೆಂಗಳೂರು, ದಿನಾಂಕ : 15-04-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಭಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಆರೋಪಿತ ಅಧಿಕಾರಿಯಾದ ಶ್ರೀ ಎಸ್.ಆರ್. ಅಮಾನುಲ್ಲಾ ಷರೀಫ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರವರು, ವಾಣಿಜ್ಯ ತೆರಿಗೆ ಇಲಾಖೆ, ಇವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 13(1)(ಇ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು,1977ರ ನಿಯಮ-19 ರನ್ವಯ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತುಸಹಿಯ ಅಡಿಯಲ್ಲಿ ದಿನಾಂಕ: 15-04-2011 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಆರ್. ಚಂದ್ರಶೇಖರಾರಾಧ್ಯ**
ಪೀಠಾಧಿಕಾರಿ
ಪಿ.ಆರ್. 1165 ಆರ್ಥಿಕ ಇಲಾಖೆ (ವಾಣೀಜ್ಯ ತೆರಿಗೆ-2)

## ಶಿಕ್ಷಣ ಸಚಿವಾಲಯ

**ವಿಷಯ :** ಹೊರ ರಾಜ್ಯದ ಕನ್ನಡೇತರ ವಿದ್ಯಾರ್ಥಿಗಳಿಗೆ ಕನ್ನಡವನ್ನು ತೃತೀಯ ಭಾಷೆಯನ್ನಾಗಿ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರ ದಿನಾಂಕ : 22-2-2011ರ ಪತ್ರ ಸಂಖ್ಯೆ ಡಿ.ಎಸ್.ಇ.ಆರ್.ಟಿ./ಇ.ವಿ.ಜಿ./ಇತರೆ 73/2010-11.

ಪ್ರಸ್ತಾವನೆ :

ಮೇಲೆ ಓದಲಾದ ದಿ. 22-2-2011ರ ಪತ್ರದಲ್ಲಿ ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರು 2008-09ನೇ ಸಾಲಿನಿಂದ ಕರ್ನಾಟಕದಲ್ಲಿ ಕನ್ನಡ ಮಾತೃ ಭಾಷೆಯಲ್ಲದವರಿಗೆ ಮತ್ತು ಆಂಗ್ಲ ಮಾಧ್ಯಮದಲ್ಲಿ ಒಂದನೇ ತರಗತಿಯಿಂದ ವ್ಯಾಸಂಗ ಮಾಡುತ್ತಿರುವವರಿಗೆ **"ಸವಿ ಕನ್ನಡ"** ಎಂಬ ಪಠ್ಯ ಪುಸ್ತಕ ಮತ್ತು ಶಿಕ್ಷಕರ ಪ್ರಾಯೋಗಿಕ ಮಾರ್ಗದರ್ಶಿಗಳನ್ನು ಸಿದ್ಧಪಡಿಸಿದೆ. ಇದೇ ಪಠ್ಯ ಪುಸ್ತಕ ಮತ್ತು ಶಿಕ್ಷಕರ ಪ್ರಾಯೋಗಿಕಗಳನ್ನು ನವೋದಯ ಶಾಲೆಗಳಲ್ಲಿ ಓದುತ್ತಿರುವ ಹೊರರಾಜ್ಯದ ವಿದ್ಯಾರ್ಥಿಗಳಿಗೂ ಕೂಡ ವ್ಯಾಸಂಗ ಮಾಡಲು ನಿಗದಿಪಡಿಸಬಹುದಾಗಿದೆ ಎಂದು ಅಭಿಪ್ರಾಯಪಟ್ಟಿರುತ್ತಾರೆ. ಅದರಂತೆ, ಈ ಕೆಳಕಂಡ ಆದೇಶ :

**ಸರ್ಕಾರದ ಆದೇಶ ಸಂಖ್ಯೆ : ಇಡಿ 294 ಪಿಜಿಸಿ 2010, ಬೆಂಗಳೂರು, ದಿನಾಂಕ : 26-4-2011**

ರಾಜ್ಯದಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ವಿಶೇಷವಾಗಿ ವಸತಿ ಶಾಲೆಗಳಲ್ಲಿ ರಾಜ್ಯ ಪಠ್ಯ ಕ್ರಮದಲ್ಲಿ ಓದುತ್ತಿರುವ ಹೊರರಾಜ್ಯದ ಕನ್ನಡೇತರ ವಿದ್ಯಾರ್ಥಿಗಳಿಗೆ ಕನ್ನಡ ತೃತೀಯ ಭಾಷೆಯನ್ನಾಗಿ ನಿಗದಿಪಡಿಸಿ, **"ಸವಿ ಗನ್ನಡ"** ಮಾಲಿಕೆ ಪಠ್ಯಪುಸ್ತಕವನ್ನು ಅಳವಡಿಸಲು ಹಾಗೂ ಈ ಪಠ್ಯದ ಆಧಾರದಲ್ಲಿ 10ನೇ ತರಗತಿ ಪರೀಕ್ಷೆ ಬರೆಯಲು ಅವಕಾಶ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ಪ್ರಭುಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಪಿ.ಆರ್. 1177 ಶಿಕ್ಷಣ ಇಲಾಖೆ (ಪ್ರಾಥಮಿಕ).

## ಕಂದಾಯ ಸಚಿವಾಲಯ

**ವಿಷಯ :** ಶ್ರೀಮತಿ ಆಶಾ ಪರ್ವೀನ್, ಹಿಂದಿನ ತಹಶೀಲ್ದಾರ್ (ಪ್ರಸ್ತುತ ಅಮಾನತ್ತು) ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸುವ ಕುರಿತು-ಆದೇಶ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಕಂಇ 24 ಎಡಿಇ 2010, ದಿನಾಂಕ : 22-7-2010.
2. ಹಾಲಿ ನಿಲಂಬನೆಯಲ್ಲಿರುವ ಶ್ರೀಮತಿ ಆಶಾ ಪರ್ವೀನ್, ತಹಶೀಲ್ದಾರ್, ಶ್ರೀ ಜಿ. ರಾಮಯ್ಯ, ಗ್ರಾಮಲೆಕ್ಕಿಗರು, ಶ್ರೀ ವಿ.ಜೆ. ಅಂಗಡಿ, ಆರ್.ಆರ್. ಶಿರಸ್ತೇದಾರ್, ಶ್ರೀ ಎಂ. ಗೋವಿಂದಯ್ಯ, ತಾಲ್ಲೂಕು ಮೋಜಣಿದಾರರು, ಶ್ರೀ ವೆಂಕಟಸ್ವಾಮಿ, ಪ್ರ.ದ.ಸ. ಶ್ರೀ ನಾರಾಯಣಪ್ಪ, ಉಪ ತಹಶೀಲ್ದಾರ್, ಶ್ರೀ ಪಿ.ಎನ್. ಗೋಪಾಲಕೃಷ್ಣ, ರಾಜಸ್ವ ನಿರೀಕ್ಷಕರು ಇವರುಗಳಿಗೆ ಸರ್ಕಾರದಿಂದ ಜಾರಿ ಮಾಡಿರುವ ಕಾರಣ ಕೇಳುವ ನೋಟೀಸು ದಿನಾಂಕ : 19-1-2011.
3. ಶ್ರೀಮತಿ ಆಶಾ ಪರ್ವೀನ್, ತಹಶೀಲ್ದಾರ್ ಇವರ ಲಿಖಿತ ಹೇಳಿಕೆ ದಿನಾಂಕ : 10-2-2011.
4. ಶ್ರೀ ಜಿ. ರಾಮಯ್ಯ, ಗ್ರಾಮಲೆಕ್ಕಿಗರು ಇವರ ಲಿಖಿತ ಹೇಳಿಕೆ ದಿನಾಂಕ : 24-1-2011.
5. ಶ್ರೀ ವಿ.ಜೆ. ಅಂಗಡಿ, ಆರ್ಆರ್. ಶಿರಸ್ತೇದಾರ್ ಇವರ ಲಿಖಿತ ಹೇಳಿಕೆ ದಿನಾಂಕ : 24-1-2011
6. ಶ್ರೀ ಎಂ. ಗೋವಿಂದಯ್ಯ, ತಾಲ್ಲೂಕು ಮೋಜಣಿದಾರರು ಇವರ ಲಿಖಿತ ಹೇಳಿಕೆ ದಿನಾಂಕ : 20-1-2011.
7. ಶ್ರೀ ವೆಂಕಟಸ್ವಾಮಿ, ಪ್ರ.ದ.ಸ ಇವರ ಲಿಖಿತ ಹೇಳಿಕೆ ದಿನಾಂಕ : 20-1-2011.
8. ಶ್ರೀ ನಾರಾಯಣಪ್ಪ, ಉಪ ತಹಶೀಲ್ದಾರ್ ಇವರ ಲಿಖಿತ ಹೇಳಿಕೆ ದಿನಾಂಕ : 24-1-2011.
9. ಶ್ರೀ ಪಿ.ಎನ್. ಗೋಪಾಲಕೃಷ್ಣ, ರಾಜಸ್ವ ನಿರೀಕ್ಷಕರು ಇವರ ಲಿಖಿತ ಹೇಳಿಕೆ ದಿನಾಂಕ : 24-1-2011.

ಪ್ರಸ್ತಾವನೆ :

ಶ್ರೀಮತಿ ಆಶಾ ಪರ್ವೀನ್ ಇವರು ದೇವನಹಳ್ಳಿ ತಾಲ್ಲೂಕು ತಹಶೀಲ್ದಾರರಾಗಿ ಕಾರ್ಯನಿರ್ವಹಿಸಿರುವ ಅವಧಿಯಲ್ಲಿ ಕಂಡು ಬಂದಿರುವ ಅವ್ಯವಹಾರಗಳ ಪ್ರಕರಣದ ಬಗ್ಗೆ ತನಿಖೆ ನಡೆಸಿ ಸರ್ಕಾರಕ್ಕೆ ವರದಿ ಸಲ್ಲಿಸುವಂತೆ ಬೆಂಗಳೂರು ವಿಭಾಗದ ಪ್ರಾದೇಶಿಕ ಆಯುಕ್ತರನ್ನು ಕೋರಿದ್ದು, ಅದರಂತೆ ಪ್ರಾದೇಶಿಕ ಆಯುಕ್ತರು ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಒಂದು ತನಿಖಾ ತಂಡವನ್ನು ರಚಿಸಿ, ತನಿಖಾ

ವರದಿಯನ್ನು ಪ್ರಾದೇಶಿಕ ಆಯುಕ್ತರಿಗೆ ಸಲ್ಲಿಸಿದ್ದು, ಸದರಿ ವರದಿಯಲ್ಲಿ ಶ್ರೀಮತಿ ಆಶಾ ಪರ್ವೀನ್‌ರವರು ಕೆಲವು ಪ್ರಕರಣದಲ್ಲಿ ಗಂಭೀರ ಸ್ವರೂಪದ ತಪ್ಪುಗಳನ್ನು ಎಸಗಿದ್ದರೆಂದು, ಸರ್ಕಾರಿ ಜಮೀನಿನ ಮಂಜೂರಾತಿಯಲ್ಲಿ ಅಕ್ರಮ ಎಸಗಿದ್ದಾರೆಂದು ವರದಿ ನೀಡಿರುತ್ತಾರೆ.

ತನಿಖಾ ವರದಿಯೊಂದಿಗೆ ಒದಗಿಸಿದ ದಾಖಲೆ/ದಸ್ತಾವೇಜುಗಳನ್ನು ಪರಿಶೀಲಿಸಲಾಗಿ, ಶ್ರೀಮತಿ ಆಶಾ ಪರ್ವೀನ್, ಹಿಂದಿನ ತಹಶೀಲ್ದಾರ್, ದೇವನಹಳ್ಳಿ, ಶ್ರೀ ನಾರಾಯಣಪ್ಪ, ಉಪ ತಹಶೀಲ್ದಾರ್, ಚನ್ನರಾಯ ಪಟ್ಟಣಹೋಬಳಿ, ಶ್ರೀ ವೆಂಕಟಸ್ವಾಮಿ, ಪ್ರ.ದ.ಸ, ತಾಲ್ಲೂಕು ಕಛೇರಿ, ದೇವನಹಳ್ಳಿ, ಶ್ರೀ ವಿ.ಜಿ. ಅಂಗಡಿ, ಶಿರಸ್ತೇದಾರ್, ತಾಲ್ಲೂಕು ಕಛೇರಿ, ದೇವನಹಳ್ಳಿ, ಶ್ರೀ ಪಿ.ಎನ್. ಗೋಪಾಲಕೃಷ್ಣ, ರಾಜಸ್ವ ನಿರೀಕ್ಷಕರು, ಕುಂದಾಣ ಹೋಬಳಿ, ಶ್ರೀ ಜಿ. ರಾಮಯ್ಯ, ಗ್ರಾಮಲೆಕ್ಕಿಗರು, ಕಾರಹಳ್ಳಿ ವೃತ್ತ, ಶ್ರೀ ಎಂ. ಗೋವಿಂದಯ್ಯ, ತಾಲ್ಲೂಕು ಮೋಜಣಿದಾರರು, ತಾಲ್ಲೂಕು ಸರ್ವೇಯರ್, ತಾಲ್ಲೂಕು ಕಛೇರಿ, ದೇವನಹಳ್ಳಿ ಇವರುಗಳು ಈ ಕೆಳಕಂಡ ಅಕ್ರಮ ಎಸಗಿದ್ದಾರೆ.

(1) ದೇವನಹಳ್ಳಿ ತಾಲ್ಲೂಕಿನ ಚನ್ನರಾಯಪಟ್ಟಣ ಹೋಬಳಿಯ ಸೋಮತ್ತನಹಳ್ಳಿ ಗ್ರಾಮದ ಸರ್ಕಾರಿ ಜಮೀನು ಸರ್ವೆ ನಂ. 148 ರಲ್ಲಿ ಶ್ರೀ ಕೃಷ್ಣಪ್ಪ ಬಿನ್ ಮಾರಪ್ಪ ಮತ್ತು ಶ್ರೀಮತಿ ನಾರಾಯಣಮ್ಮ ಕೋಂ. ಮುನಿಶಾಮಪ್ಪ ಇವರಿಗೆ ತಲಾ 2.20 ಎಕರೆ ಒಟ್ಟು 5 ಎಕರೆ ಜಮೀನಿಗೆ ಅಕ್ರಮವಾಗಿ ಸಾಗುವಳಿ ಚೀಟಿ ನೀಡಿ ಹಕ್ಕು ದಾಖಲೆ ಮಾಡಿರುತ್ತಾರೆ.

(2) ತೈಲಗೆರೆ ಗ್ರಾಮದ ಸರ್ವೆ ನಂ. 105 ರಲ್ಲಿ 3.02 ಎಕರೆ ಸರ್ಕಾರಿ ಜಮೀನು ಸರ್ಕಾರಿ ಬೀಳು ಎಂದು ದಾಖಲಾಗಿರುವುದನ್ನು ಶ್ರೀ ಸೀತಪ್ಪ ಬಿನ್ ನಾರಾಯಣಪ್ಪ ಎಂಬುವವರಿಗೆ ಕಾನೂನುಬಾಹಿರವಾಗಿ ಹಕ್ಕು ಬದಲಾವಣೆ ಮಾಡಿರುತ್ತಾರೆ.

(3) ದೇವನಹಳ್ಳಿ ತಾಲ್ಲೂಕು ಕಸಬಾ ಹೋಬಳಿ ಆವತಿ ಗ್ರಾಮದ ಸರ್ವೆ ನಂ. 226 ರ ಜಮೀನಿಗೆ ಬದಲಾಗಿ ಸರ್ವೆ ನಂ. 266 ಜಮೀನೆಂದು ತಿದ್ದುಪಡಿ ಮಾಡಿ ಗಂಗರಾಜು ಬಿನ್ ಮುನಿಶಾಮಪ್ಪ ಇವರಿಗೆ ಸಾಗುವಳಿ ಚೀಟಿ ನೀಡಿರುತ್ತಾರೆ.

(4) ಹಿಂದಿನ ದೇವನಹಳ್ಳಿ ತಹಶೀಲ್ದಾರ್ ಶ್ರೀ ಸಂಪತ್‌ಕುಮಾರ್ ಇವರು ವಿವಾದಿತ ಜಮೀನಿನ ಪ್ರಕರಣ ಸಂಖ್ಯೆ : ಹೆಚ್‌ಒಎ/ಸಿಆರ್/11/99–2000 ರಂತೆ 8–12–2008 ರಂದು ಅಂತಿಮ ಆದೇಶ ಹೊರಡಿಸಿರುವ ಪ್ರಕರಣವನ್ನು ಮರುವಿಚಾರಣೆಗೆ ದಿನಾಂಕ : 24–12–2009 ರಂದು ಕೈಗೆತ್ತಿಕೊಂಡು, ಗ್ರಾಮ ರದ್ದಿಯಾತಿ ಕಾಯ್ದೆ 1961 ರ ಕಲಂ 5 ರನ್ವಯ ಆದೇಶದಿಂದ ಬಾಧಿತರಾದ ವಾದಿ ಮತ್ತು ಪ್ರತಿವಾದಿಗಳು ಕಾಯ್ದೆಯ ಕಲಂ 3 ರನ್ವಯ ಜಿಲ್ಲಾ ನ್ಯಾಯಾಧೀಶರು ಮತ್ತು ಜಿಲ್ಲಾ ಸತ್ರ ನ್ಯಾಯಾಲಯದ ಮುಂದೆ ಮತ್ತು ಮೇಲ್ಮನವಿ ಸಲ್ಲಿಸಲು ಅವಕಾಶವಿದ್ದು ಇದನ್ನು ಉಲ್ಲಂಘಿಸಿ, ತಮ್ಮ ಅಧಿಕಾರ ವ್ಯಾಪ್ತಿ ಮೀರಿ, ಹಿಂದಿನ ತಹಶೀಲ್ದಾರರ ಆದೇಶ ಮರುವಿಚಾರಣೆಗೆ ಕೈಗೊಂಡು ನ್ಯಾಯಾಲಯದ ಆದೇಶದಲ್ಲಿ ಹಸ್ತಕ್ಷೇಪ ಮಾಡಿರುತ್ತಾರೆ.

ಶ್ರೀಮತಿ ಆಶಾ ಪರ್ವೀನ್, ಹಿಂದಿನ ತಹಶೀಲ್ದಾರ್, ದೇವನಹಳ್ಳಿ ಹಾಗೂ ಇತರರು ಸರ್ಕಾರದ ನೀತಿ–ನಿಯಮಗಳನ್ನು ಉಲ್ಲಂಘಿಸಿ, ಕೋಟ್ಯಾಂತರ ರೂಪಾಯಿ ಬೆಲೆ ಬಾಳುವ ಸರ್ಕಾರಿ ಜಮೀನನ್ನು ಅಕ್ರಮವಾಗಿ ಖಾತೆ ಮಾಡಿ ಪರಭಾರೆ ಮಾಡಿದ್ದು, ಅಕ್ರಮ ಅವ್ಯವಹಾರ ಎಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಸರ್ಕಾರಕ್ಕೆ ಅಪಾರ ನಷ್ಟ ಉಂಟು ಮಾಡಿದ್ದಾರೆ. ಆದ್ದರಿಂದ, ಈ ಕೆಳಕಂಡ ಅಧಿಕಾರಿ ಮತ್ತು ನೌಕರರನ್ನು ಸಿಸಿಎ ನಿಯಮ 10(1)(ಡಿ) & (3) ರನ್ವಯ ಕೂಡಲೇ ಜಾರಿಗೆ ಬರುವಂತೆ ಅವರುಗಳ ವಿರುದ್ಧದ ಇಲಾಖಾ ವಿಚಾರಣೆ ಬಾಕಿ ಇರಿಸಿ ಸೇವೆಯಿಂದ ಅಮಾನತ್ತುಗೊಳಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ : (1) ರ ದಿನಾಂಕ : 22–7–2010ರ ಸರ್ಕಾರದ ಆದೇಶದಲ್ಲಿ ಆದೇಶಿಸಲಾಗಿತ್ತು.

| ಕ್ರ. ಸಂ. | ಹೆಸರು, ಹುದ್ದೆ |
|---|---|
| 1 | ಶ್ರೀಮತಿ ಆಶಾ ಪರ್ವೀನ್, ಹಿಂದಿನ ತಹಶೀಲ್ದಾರ್, ದೇವನಹಳ್ಳಿ |
| 2. | ಶ್ರೀ ನಾರಾಯಣಪ್ಪ, ಉಪ ತಹಶೀಲ್ದಾರ್, ಚನ್ನರಾಯಪಟ್ಟಣ ಹೋಬಳಿ |
| 3. | ಶ್ರೀ ವೆಂಕಟಸ್ವಾಮಿ, ಪ್ರ.ದ.ಸ., ವಿಷಯ ನಿರ್ವಾಹಕರು |
| 4. | ಶ್ರೀ ವಿ.ಜೆ. ಅಂಗಡಿ, ಆರ್.ಆರ್. ಶಿರಸ್ತೇದಾರ್ |
| 5. | ಶ್ರೀ ಪಿ.ಎನ್. ಗೋಪಾಲಕೃಷ್ಣ, ರಾಜಸ್ವ ನಿರೀಕ್ಷಕರು |
| 6. | ಶ್ರೀ ಜಿ. ರಾಮಯ್ಯ, ಗ್ರಾಮ ಲೆಕ್ಕಿಗರು |
| 7. | ಶ್ರೀ ಎಂ. ಗೋವಿಂದಯ್ಯ, ತಾಲ್ಲೂಕು ಮೋಜಣಿದಾರರು |

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಸರ್ಕಾರವು ದಿನಾಂಕ : 19–1–2011 ರಂದು, ಹಾಲಿ ಅಮಾನತ್ತಿನಲ್ಲಿರುವ ಶ್ರೀಮತಿ ಆಶಾ ಪರ್ವೀನ್, ತಹಶೀಲ್ದಾರ್, ಶ್ರೀ ಜಿ. ರಾಮಯ್ಯ, ಗ್ರಾಮಲೆಕ್ಕಿಗರು, ಶ್ರೀ ವಿ.ಜೆ. ಅಂಗಡಿ, ಆರ್.ಆರ್. ಶಿರಸ್ತೇದಾರ್, ಶ್ರೀ ಎಂ. ಗೋವಿಂದಯ್ಯ, ತಾಲ್ಲೂಕು ಮೋಜಣಿದಾರರು, ಶ್ರೀ ವೆಂಕಟಸ್ವಾಮಿ, ಪ್ರ.ದ.ಸ, ಶ್ರೀ ನಾರಾಯಣಪ್ಪ, ಉಪ ತಹಶೀಲ್ದಾರ್, ಶ್ರೀ ಪಿ.ಎನ್. ಗೋಪಾಲಕೃಷ್ಣ, ರಾಜಸ್ವ ನಿರೀಕ್ಷಕರು ಇವರುಗಳಿಗೆ ಕಾರಣ ಕೇಳುವ ನೋಟೀಸಿನೊಂದಿಗೆ ಬೆಂಗಳೂರು ವಿಭಾಗದ ಪ್ರಾದೇಶಿಕ ಆಯುಕ್ತರು ಕಳುಹಿಸಿರುವ ದೋಷಾರೋಪಣೆ ಪಟ್ಟಿಯ ಅನುಬಂಧ 1 ರಿಂದ 4 ಗಳನ್ನು ಜಾರಿಗೊಳಿಸಿ, ಸದರಿ ನೋಟೀಸು ಸ್ವೀಕರಿಸಿದ 15 ದಿನಗಳೊಳಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ತಪ್ಪಿದಲ್ಲಿ ನಿಮ್ಮ ಪ್ರತಿವಾದವೇನೂ ಇಲ್ಲವೆಂದು ಭಾವಿಸಿ, ಕ.ನಾಸೇ (ವ.ನಿ. & ಮೇ) ನಿಯಮ 1957ರ ನಿಯಮ 11ನೇ ಮೇರೆಗೆ ಅವರ ಮೇಲೆ ಏಕಪಕ್ಷೀಯವಾಗಿ ಮುಂದಿನ ಕ್ರಮ ತೆಗೆದುಕೊಳ್ಳಲಾಗುವುದು ಎಂದು ತಿಳಿಸಲಾಗಿರುತ್ತದೆ.

ಸರ್ಕಾರದ ಕಾರಣಕೇಳುವ ನೋಟೀಸಿಗೆ ಮೇಲಿನ ಒಟ್ಟು 7 ಜನ ಅಮಾನತ್ತಿನಲ್ಲಿರುವ ಅಧಿಕಾರಿ/ನೌಕರರುಗಳು ಮೇಲೆ ಓದಲಾದ ಕ್ರಮ ಸಂಖ್ಯೆ (3) ರಿಂದ (9) ರಂತೆ ವಿವಿಧ ದಿನಾಂಕಗಳಂದು ಈ ಕೆಳಕಂಡಂತೆ ಸರ್ಕಾರಕ್ಕೆ ತಮ್ಮ ಲಿಖಿತ ಹೇಳಿಕೆಗಳನ್ನು ಸಲ್ಲಿಸಿರುತ್ತಾರೆ.

| ಕ್ರ. ಸಂ. | ಅಧಿಕಾರಿ/ನೌಕರರ ಹೆಸರು | ಲಿಖಿತ ಹೇಳಿಕೆ |
|---|---|---|
| 1 | ಶ್ರೀಮತಿ ಆಶಾ ಪರ್ವೀನ್, ಹಿಂದಿನ ತಹಶೀಲ್ದಾರ್, ದೇನವಹಳ್ಳಿ, ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ (ಹಾಲಿ ನಿಲಂಬನೆ). | ಅವರು ದಿನಾಂಕ : 31–1–2009 ರಿಂದ 15–2–2010 ರವರೆಗೆ ದೇವನಹಳ್ಳಿ ತಾಲ್ಲೂಕಿನಲ್ಲಿ ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸಿದ್ದು, ಅವರ ಸೇವಾ ಅವಧಿಯಲ್ಲಿ ಯಾವುದೇ ಕರ್ತವ್ಯ ಲೋಪ ಎಸಗದೇ ಸಿಸಿಎ ನಿಯಮಗಳಂತೆ |

| | | |
|---|---|---|
| | | ಕಾನೂನು ಬದ್ಧವಾಗಿ ಕರ್ತವ್ಯ ನಿರ್ವಹಿಸಿದ್ದು, ನೋಟೀಸಿನ ಅನುಬಂಧ 1,2,3 ರಲ್ಲಿನ ಮಾಡಿರುವ ಎಲ್ಲಾ ಆರೋಪಗಳು ಸುಳ್ಳಿನಿಂದ ಕೂಡಿದ್ದು, ಆರೋಪಗಳನ್ನು ಅಲ್ಲಗಳೆದು ನಿರಾಕರಿಸಿರುತ್ತಾರೆ. ಆದ್ದರಿಂದ, ತಮ್ಮ ಮೇಲಿನ ವಿಚಾರಣೆಯಿಂದ ಕೈಬಿಡಬೇಕೆಂದು ಮತ್ತು ಅಮಾನತ್ತು ತೆರವುಗೊಳಿಸಿ ಸರ್ಕಾರಿ ಸೇವೆಯನ್ನು ನಿರ್ವಹಿಸಲು ಅವಕಾಶ ಮಾಡಿಕೊಡಬೇಕೆಂದು ಕೋರಿರುತ್ತಾರೆ. |
| 2 | ಶ್ರೀ ಜಿ. ರಾಮಯ್ಯ, ಗ್ರಾಮಲೆಕ್ಕಗರು, ಕಾರಳ್ಳಿ ವೃತ್ತ, ಕುಂದಾಣ ಹೋಬಳಿ, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ (ಹಾಲಿ ನಿಲಂಬನೆ) | ದರಖಾಸ್ತು ಶಾಖೆಯಿಂದ ನಿರ್ದೇಶನದೊಂದಿಗಿನ ಜ್ಞಾಪನ ಪತ್ರವನ್ನು ಚೆಕ್‌ಲಿಸ್ಟ್‌ನೊಂದಿಗೆ ತಾಳೆ ನೋಡಿ ಜ್ಞಾಪನ ಪತ್ರದಲ್ಲಿ ತಹಶೀಲ್ದಾರ್ ರವರು ನೀಡಿರುವ ನಿರ್ದೇಶನದಂತೆ ಮಾತ್ರ ಮ್ಯುಟೇಷನ್ ಅಂಗೀಕರಿಸಲಾಗಿದೆ. ಆದ್ದರಿಂದ, ಯಾವುದೇ ರೀತಿಯ ಕರ್ತವ್ಯಲೋಪ ಎಸಗಿರುವುದಿಲ್ಲ ಮತ್ತು ತಮ್ಮನ್ನು ಅಮಾನತ್ತುಗೊಳಿಸಿ ಇಲಾಖಾ ವಿಚಾರಣೆಗೆ ಆದೇಶ ಮಾಡಲಾಗಿರುತ್ತದೆ. ಅಮಾನತ್ತುಗೊಳಿಸಿ ಆರು ತಿಂಗಳ ಅವಧಿ ಕಳೆದಿದ್ದು, ತಮ್ಮ ಕುಟುಂಬವನ್ನು ನಿರ್ವಹಿಸಲು ತುಂಬಾ ಕಷ್ಟವಾಗಿರುವುದರಿಂದ, ಮಾನವೀಯತೆ ತೋರಿ ತಮ್ಮ ಅಮಾನತ್ತನ್ನು ತೆರವುಗೊಳಿಸಿ ಕರ್ತವ್ಯಕ್ಕೆ ಹಾಜರಾಗುವಂತೆ ಆದೇಶ ಮಾಡುವಂತೆ ಕೋರಿರುತ್ತಾರೆ. |
| 3 | ಶ್ರೀ ವಿ.ಜೆ. ಅಂಗಡಿ, ಆರ್.ಆರ್. ಶಿರಸ್ತೇದಾರ್, ದೇವನಹಳ್ಳಿ ತಾಲ್ಲೂಕು ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ (ಹಾಲಿ ನಿಲಂಬನೆ) | ತಹಶೀಲ್ದಾರ್ ರವರು ದರ್ಖಾಸ್ತು ಶಾಖೆಯ ಬೇರೆ ಶಿರಸ್ತೇದಾರರು ಮಂಡಿಸಿರುವುದನ್ನು ಸಹಿ ಮಾಡಿ ಅನುಮೋದಿಸಿ, ಲಿಖಿತವಾಗಿ ನೀಡಿದ್ದ ಜ್ಞಾಪನದಲ್ಲಿಯ ನಿರ್ದೇಶನದಂತೆ ಮತ್ತು ತಹಶೀಲ್ದಾರರು ಖುದ್ದಾಗಿ ಗಣಕ ಕೇಂದ್ರಕ್ಕೆ ಬಂದು ಅವರ ಲಾಗಿನ್‌ನಲ್ಲಿ ಚೆಕ್‌ಲಿಸ್ಟ್ ಅನುಮೋದಿಸಿದ್ದರಿಂದ, ಮೇಲಾಧಿಕಾರಿಗಳ ಆದೇಶದಂತೆ ಕರ್ತವ್ಯ ನಿರ್ವಹಿಸಿದ್ದು, ಆದ್ದರಿಂದ, ಮೇಲುನೋಟದಲ್ಲಿಯೇ ತಾವು ಯಾವುದೇ ಕರ್ತವ್ಯ ಚ್ಯುತಿ ಎಸಗಿರುವುದಿಲ್ಲವೆಂದು, ಈ ಅಂಶಗಳನ್ನು ಪರಿಶೀಲಿಸಿ ಅಮಾನತ್ತುಗೊಂಡು ಆರೂ ತಿಂಗಳು ಕಳೆದಿದ್ದು, ಸಂಸಾರ ನಿರ್ವಹಿಸಲು ತುಂಬಾ ಕಷ್ಟವಾಗಿರುವುದರಿಂದ ತಮ್ಮ ಅಮಾನತ್ತು ಆದೇಶವನ್ನು ರದ್ದುಪಡಿಸಿ, ತಮ್ಮ ಮೇಲಿನ ಆರೋಪಗಳನ್ನು ಮುಕ್ತಗೊಳಿಸಿ, ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಮತ್ತು ತಮ್ಮನ್ನು ಸೇವೆಗೆ ಪುನರ್ ನೇಮಿಸುವಂತೆ ಕೋರಿರುತ್ತಾರೆ. |
| 4 | ಶ್ರೀನಾರಾಯಣಪ್ಪ, ಉಪ ತಹಶೀಲ್ದಾರ್, ಚನ್ನರಾಯಪಟ್ಟಣ ಹೋಬಳಿ, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ (ಹಾಲಿ ನಿಲಂಬನೆ) | ದರಖಾಸ್ತು ಶಾಖೆಯಿಂದ ನಿರ್ದೇಶನದೊಂದಿಗಿನ ಜ್ಞಾಪನ ಪತ್ರವನ್ನು ಚೆಕ್ ಲಿಸ್ಟ್‌ನೊಂದಿಗೆ ತಾಳೆ ನೋಡಿ ಜ್ಞಾಪನ ಪತ್ರದಲ್ಲಿ ತಹಶೀಲ್ದಾರ್ ರವರು ನೀಡಿರುವ ನಿರ್ದೇಶನದಂತೆ ಮಾತ್ರ ಮ್ಯುಟೇಷನ್ ಅಂಗೀಕರಿಸಲಾಗಿದೆ. ತಹಶೀಲ್ದಾರ್ ನಿರ್ದೇಶನದಂತೆ, ಆ ದಿನ ಮಾತ್ರ ದರ್ಖಾಸ್ತು ಶಿರಸ್ತೇದಾರರಾಗಿ ಕಾರ್ಯ ನಿರ್ವಹಿಸಿದ್ದು, ಈ ಪ್ರಕರಣದಲ್ಲಿ ಅಮಾಯಕ ಹಾಗೂ ಸಂಬಂಧ ಪಡೆಯದೇ ಇದ್ದ ತಮ್ಮನ್ನು ಅಮಾನತ್ತು ಮಾಡಲಾಗಿದ್ದು, ಅಮಾನತ್ತುಗೊಳಿಸಿ ಆರು ತಿಂಗಳ ಅವಧಿ ಕಳೆದಿದ್ದು, ತಮ್ಮ ಕುಟುಂಬವನ್ನು ನಿರ್ವಹಿಸಲು ತುಂಬಾ ಕಷ್ಟವಾಗಿರುವುದರಿಂದ, ಇದುವರೆವಿಗೂ ಇಲಾಖಾ ವಿಚಾರಣೆ ನಡೆಸದೇ ಇರುವುದರಿಂದ, ತಮ್ಮ ಮೇಲಿನ ಇಲಾಖಾ ವಿಚಾರಣೆಯನ್ನು ಕೈಬಿಡಲು ಮತ್ತು ಅಮಾನತ್ತನ್ನು ತೆರವುಗೊಳಿಸಿ ಕರ್ತವ್ಯದ ಮೇಲೆ ತೆಗೆದುಕೊಳ್ಳುವಂತೆ ಕೋರಿರುತ್ತಾರೆ. |
| 5 | ಶ್ರೀ ವೆಂಕಟಸ್ವಾಮಿ, ಪ್ರಥಮ ದರ್ಜೆ ಸಹಾಯಕರು, ವಿಷಯ ನಿರ್ವಾಹಕರು, ದೇವನಹಳ್ಳಿ ತಾಲ್ಲೂಕು ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ (ಹಾಲಿ ನಿಲಂಬನೆ) | ಸಾಗುವಳಿ ಚೀಟಿ ನೀಡಲು ಕಛೇರಿ ಟಿಪ್ಪಣಿ ಮಂಡಿಸಿದ್ದು, ಶಿರಸ್ತೇದಾರ್ ಮತ್ತು ತಹಶೀಲ್ದಾರ್ ರವರು ಕೃಷ್ಣಪ್ಪ ನಾರಾಯಣಮ್ಮ ಎಂಬುವವರಿಗೆ ಸಾಗುವಳಿ ಚೀಟಿಯನ್ನು ನೀಡಲು ಆದೇಶ ನೀಡಿರುತ್ತಾರೆ. ಈ ಪ್ರಕರಣದಲ್ಲಿ ಅವರು ಅಮಾಯಕರಾಗಿರುವುದರಿಂದ, ತಮ್ಮ ಮೇಲಿನ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಅಮಾನತ್ತಿನಿಂದ ತೆರವುಗೊಳಿಸಿ, |

| | | |
|---|---|---|
| | | ಈಗಾಗಲೇ ಅಮಾನತ್ತುಗೊಂಡು 6 ತಿಂಗಳ ಅವಧಿ ಪೂರ್ಣಗೊಂಡಿರುವುದರಿಂದ, ದೇವನಹಳ್ಳಿ ತಾಲ್ಲೂಕು ಕಛೇರಿಯಲ್ಲಿ ಪ್ರ.ದ.ಸ.ರಾಗಿ ಪುನರ್ ನೇಮಕ ಮಾಡಲು ಆದೇಶ ಮಾಡಬೇಕೆಂದು ಕೋರಿರುತ್ತಾರೆ. |
| 6 | ಶ್ರೀ ಪಿ.ಎನ್. ಗೋಪಾಲಕೃಷ್ಣ, ರಾಜಸ್ವ ನಿರೀಕ್ಷಕರು, ಕುಂದಾಣ ಹೋಬಳಿ, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ (ಹಾಲಿ ನಿಲಂಬನೆ) | ದರಖಾಸ್ತು ಶಾಖೆಯ ನಿರ್ದೇಶನದೊಂದಿಗಿನ ಜ್ಞಾಪನ ಪತ್ರವನ್ನು ಚೆಕ್‌ಲಿಸ್ಟ್‌ನೊಂದಿಗೆ ತಾಳೆ ನೋಡಿ ಜ್ಞಾಪನ ಪತ್ರದಲ್ಲಿ ತಹಶೀಲ್ದಾರ್‌ರವರು ಸ್ವತಃ ಗಣಕ ಕೇಂದ್ರಕ್ಕೆ ಬಂದು ಅವರ ಲಾಗಿನ್‌ನಲ್ಲಿ ಚೆಕ್‌ಲಿಸ್ಟ್ ಅನ್ನು ಅನುಮೋದಿಸಿದಂತೆ, ತಹಶೀಲ್ದಾರ್ ನೀಡಿರುವ ನಿರ್ದೇಶನದಂತೆ ಗ್ರಾಮಲೆಕ್ಕಾಧಿಕಾರಿಗಳಿಗೆ ಮುಂದಿನ ಕ್ರಮಕ್ಕಾಗಿ ಕಳುಹಿಸಿದಂತೆ ಮ್ಯುಟೇಷನ್ ಅಂಗೀಕರಿಸಲಾಗಿದೆ. ತಹಶೀಲ್ದಾರ್ ರವರು ನೀಡಿದ ನಿರ್ದೇಶನದಂತೆ, ಮಾತ್ರ ಮ್ಯುಟೇಷನ್ ಅಂಗೀಕರಿಸಿದ್ದು, ಯಾವುದೇ ರೀತಿಯ ಕರ್ತವ್ಯ ಲೋಪ ಎಸಗಿರುವುದಿಲ್ಲ. ಈ ಪ್ರಕರಣದಲ್ಲಿ ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಅಮಾನತ್ತಿನಿಂದ ತೆರವುಗೊಳಿಸಿ, ಈಗಾಗಲೇ ಅಮಾನತ್ತುಗೊಂಡು 6 ತಿಂಗಳ ಅವಧಿ ಪೂರ್ಣಗೊಂಡಿರುವುದರಿಂದ, ಸೇವೆಗೆ ಪುನರ್ ನೇಮಕ ಮಾಡಲು ಆದೇಶ ಮಾಡಬೇಕೆಂದು ಕೋರಿರುತ್ತಾರೆ. |
| 7 | ಶ್ರೀ ಎಂ. ಗೋವಿಂದಯ್ಯ, ತಾಲ್ಲೂಕು ಮೋಜಿಣಿದಾರರು, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ (ಹಾಲಿ ನಿಲಂಬನೆ) | ಆರೋಪದಲ್ಲಿ ತಿಳಿಸಿರುವ ಅಂಶಗಳ ಕುರಿತು ಸರ್ವೆ ದಾಖಲೆಗಳನ್ನು ಪರಿಶೀಲಿಸಲಾಗಿ, ತೈಲಗೆರೆ ಗ್ರಾಮದ ಸರ್ವೆ ನಂ. 105 ಆಕಾರ ಬಂದಿನಂತೆ ಖುಷ್ಕಿ ಸಾಗುವಳಿಯಲ್ಲಿದ್ದು, ಸರ್ಕಾರಿ ಜಮೀನಾಗಿರುವುದಿಲ್ಲ. ತೈಲಗೆರೆ ಗ್ರಾಮದ ರಿ.ಸ.ನಂ. 105 ಪೂರಾ ವಿಸ್ತೀರ್ಣವಾಗಿದ್ದು, ಸರ್ಕಾರಿ ಸುತ್ತೋಲೆ ವಿರುದ್ಧವಾಗಿ ದುರಸ್ತಿ ಮಾಡಿರುವುದಿಲ್ಲ ಮತ್ತು ಮೂಲ ಟಿಪ್ಪಣಿಯಲ್ಲಿನ ವಿಸ್ತೀರ್ಣದಂತೆ ಅನುಭವ ಹೊಂದಿರುವ ಬಗ್ಗೆ ಪರಿಶೀಲಿಸಿ ನಕ್ಷೆ ತಯಾರಿಸಿರುವುದೇ ವಿನಃ ಯಾವುದೇ ದುರಸ್ತಿ ಕೆಲಸ ಮಾಡಿರುವುದಿಲ್ಲ. ಈಗಾಗಲೇ ಅಮಾನತ್ತುಗೊಂಡು 6 ತಿಂಗಳ ಅವಧಿ ಪೂರ್ಣಗೊಂಡಿರುವುದರಿಂದ, ತಮ್ಮನ್ನು ಆರೋಪದಿಂದ ಮುಕ್ತಗೊಳಿಸಿ, ಸೇವೆಗೆ ಪುನರ್ ನೇಮಕ ಮಾಡಲು ಆದೇಶ ಮಾಡಬೇಕೆಂದು ಕೋರಿರುತ್ತಾರೆ. |

ಮೇಲಿನ ಅಮಾನತ್ತುಗೊಂಡ ಒಟ್ಟು 7 ಜನ ಅಧಿಕಾರಿ/ನೌಕರರು ತಮ್ಮ ಲಿಖಿತ ಹೇಳಿಕೆ ಸಲ್ಲಿಸಿ, ತಮ್ಮಗಳ ವಿರುದ್ಧದ ಆರೋಪಗಳನ್ನು ಅಲ್ಲಗಳೆದು, ಈಗಾಗಲೇ ಅಮಾನತ್ತುಗೊಂಡು 6 ತಿಂಗಳ ಹೆಚ್ಚಿನ ಅವಧಿ ಪೂರ್ಣಗೊಂಡಿರುವುದರಿಂದ, ತಮ್ಮನ್ನು ಆರೋಪದಿಂದ ಮುಕ್ತಗೊಳಿಸಿ, ಸೇವೆಗೆ ಪುನರ್ ನೇಮಕ ಮಾಡಲು ಆದೇಶ ಮಾಡಬೇಕೆಂದು ಕೋರಿರುತ್ತಾರೆ.

ಮೇಲೆ ವಿವರಿಸಿದಂತೆ, ಪ್ರಕರಣದಲ್ಲಿನ ಸತ್ಯಾಸತ್ಯತೆಯನ್ನು ತಿಳಿದುಕೊಂಡು ನಿರ್ಣಯ ತೆಗೆದುಕೊಳ್ಳುವ ಸಲುವಾಗಿ, ಹಾಲಿ ಅಮಾನತ್ತಿನಲ್ಲಿರುವ ಮೇಲಿನ 7 ಜನ ಅಧಿಕಾರಿ/ನೌಕರರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಎಂ.ಜಿ. ಹಿರೇಮಠ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ನಂ. 746, 15ನೇ ಮೈನ್, ಜುಡಿಷಿಯಲ್ ಲೇಔಟ್, ಅಲ್ಲಾಳಸಂದ್ರ, ಜಿ.ಕೆ.ವಿ.ಕೆ. ಪೋಸ್ಟ್, ಬೆಂಗಳೂರು-65 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ತೀರ್ಮಾನಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 24 ಎಡಿಇ 2010, ಬೆಂಗಳೂರು, ದಿನಾಂಕ : 26-4-2011**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 13 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಹಾಲಿ ನಿಲಂಬನೆಯಲ್ಲಿರುವ (1) ಶ್ರೀಮತಿ ಆಶಾ ಪರ್ವೀನ್, ತಹಶೀಲ್ದಾರ್ (2) ಶ್ರೀ ಜಿ. ರಾಮಯ್ಯ, ಗ್ರಾಮಲೆಕ್ಕಿಗರು (3) ಶ್ರೀ ವಿ.ಜೆ. ಅಂಗಡಿ, ಆರ್.ಆರ್. ಶಿರಸ್ತೇದಾರ್ (4) ಶ್ರೀ ಎಂ. ಗೋವಿಂದಯ್ಯ, ತಾಲ್ಲೂಕು ಮೋಜಣಿದಾರರು (5) ಶ್ರೀ ವೆಂಕಟಸ್ವಾಮಿ ಪ್ರ.ದ.ಸ. (6) ಶ್ರೀ ನಾರಾಯಣಪ್ಪ, ಉಪ ತಹಶೀಲ್ದಾರ್ (7) ಶ್ರೀ ಪಿ.ಎನ್. ಗೋಪಾಲಕೃಷ್ಣ, ರಾಜಸ್ವ ನಿರೀಕ್ಷಕರು ಇವರುಗಳ ವಿರುದ್ಧ ಬೆಂಗಳೂರಿನಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಎಂ.ಜಿ. ಹಿರೇಮಠ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ನಂ. 746, 15ನೇ ಮೈನ್, ಜುಡಿಷಿಯಲ್ ಲೇಔಟ್, ಅಲ್ಲಾಳಸಂದ್ರ, ಜಿ.ಕೆ.ವಿ.ಕೆ. ಪೋಸ್ಟ್, ಬೆಂಗಳೂರು-65 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ

ಸ್ಥಳಾವಕಾಶ ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 22 ಸೇಇವಿ 2007 ದಿನಾಂಕ : 11–4–2008 ರನ್ವಯ ರೂ. 8000/– (ಎಂಟು ಸಾವಿರ ರೂ.ಗಳು ಮಾತ್ರ) ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ. 1500/– (ಒಂದು ಸಾವಿರದ ಐನೂರು ರೂ.ಗಳು ಮಾತ್ರ) ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್) ಅನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 13 ಮತ್ತು 11(ಎ) ರಲ್ಲಿನ ವಿಧಿವಿಧಾನವನ್ನು ಅನುಸರಿಸಿ, ಜರುಗಿಸಿ, ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಬಾಲಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1178 ಕಂದಾಯ ಇಲಾಖೆ (ಸೇವೆಗಳು–3).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2011–12ನೇ ಸಾಲಿಗೆ ಗ್ರಾಮೀಣ ಮೂಲಭೂತ ಕೋಶದಡಿ (Rural Infrastructure Cell) ಬರುವ 12 ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ : 03 : ಆಂಆಸ/2011, ದಿನಾಂಕ : 1–4–2011.

**ಪ್ರಸ್ತಾವನೆ :**

ಆರ್ಥಿಕ ಇಲಾಖೆಯು 2010–11ನೇ ಸಾಲಿನಿಂದ IREP ಪ್ರಾಜೆಕ್ಟ್ ಇಂಪ್ಲಿಮೆಂಟೇಷನ್ ಕಾರ್ಯಕ್ರಮ ಮತ್ತು ಸುವರ್ಣ ಗ್ರಾಮೋದಯ ಯೋಜನೆ (Admn) ಗಳನ್ನು ವಿಲೀನಗೊಳಿಸಿ, ಗ್ರಾಮೀಣ ಮೂಲಭೂತ ಕೋಶ (Rural Infrastructure Cell) ಎಂದು ಹೊಸ ಕೋಶವನ್ನು ಸೃಜಿಸಿರುವುದರಿಂದ, IREP ಪ್ರಾಜೆಕ್ಟ್ ಇಂಪ್ಲಿಮೆಂಟೇಷನ್ ಕಾರ್ಯಕ್ರಮದಡಿ ಬರುವ 7 ಹುದ್ದೆಗಳ ಮತ್ತು ಸುವರ್ಣ ಗ್ರಾಮೋದಯ ಯೋಜನೆ (Admn) ಅಡಿ ಬರುವ 5 ಹುದ್ದೆಗಳು ಒಟ್ಟು 12 ಹುದ್ದೆಗಳು ಸೇರಿದಂತೆ ಹುದ್ದೆಗಳ ವೆಚ್ಚವನ್ನು ಗ್ರಾಮೀಣ ಮೂಲಭೂತ ಕೋಶದ (Rural Infrastructure Cell) ಲೆಕ್ಕಶೀರ್ಷಿಕೆ 2215–02–800–0–01 ರಡಿ ಭರಿಸಬೇಕಾಗಿರುತ್ತದೆ. ಗ್ರಾಮೀಣ ಮೂಲಭೂತ ಕೋಶ (Rural Infrastructure Cell) ಕೋಶವನ್ನು ನಿರ್ವಹಿಸಲು ಮತ್ತು ಸದರಿ ಕೋಶದಡಿ ಬರುವ ಎಲ್ಲಾ ಹುದ್ದೆಗಳನ್ನು 2011–12 ನೇ ಸಾಲಿಗೆ ಮುಂದುವರೆಸಲು ಸರ್ಕಾರ ತೀರ್ಮಾನಿಸಿದೆ. ಪ್ರಯುಕ್ತ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ : 105 : ಆರ್‌ಆರ್‌ಸಿ : 2011, ಬೆಂಗಳೂರು, ದಿನಾಂಕ : 23–4–2011**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ನಿರ್ವಹಿಸಲು ಗ್ರಾಮೀಣ ಮೂಲಭೂತ ಕೋಶದಡಿ (Rural Infrastructure Cell) ಬರುವ 12 ಹುದ್ದೆಗಳನ್ನು 2011–12ನೇ ಸಾಲಿಗೆ ಮುಂದುವರೆಸಲಾಗಿದೆ. ಸದರಿ ವೇತನ ವೆಚ್ಚಕ್ಕಾಗಿ 2011–12ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 2215–02–800–0–01 ರಡಿ ರೂ. 105.00 ಲಕ್ಷಗಳನ್ನು ಒದಗಿಸಲಾಗಿದೆ.

**ಗ್ರಾಮೀಣ ಮೂಲಭೂತ ಕೋಶದ Rural Infrastructure Cell) ಅಧಿಕಾರಿ/ಸಿಬ್ಬಂದಿ ವರ್ಗದ ವಿವರ :**

| ಕ್ರ.ಸಂ. | ಹುದ್ದೆ | ಸಂಖ್ಯೆ | ದರ್ಜೆ | ಲೆಕ್ಕಶೀರ್ಷಿಕೆ |
|---|---|---|---|---|
| 1 | ಯೋಜನಾ ನಿರ್ದೇಶಕರು | ಒಂದು | ಸರ್ಕಾರದ ಉಪ ಕಾರ್ಯದರ್ಶಿ | 2215–02–800–0–01 |
| 2 | ಯೋಜನಾ ನಿರ್ದೇಶಕರು | ಒಂದು | 18150–26925 | |
| 3 | ಉಪ ನಿರ್ದೇಶಕರು | ಒಂದು | ಸರ್ಕಾರದ ಅಧೀನ ಕಾರ್ಯದರ್ಶಿ | |
| 4 | ಲೆಕ್ಕ ಅಧೀಕ್ಷಕರು | ಒಂದು | 10800–20025 | |
| 5 | ಶೀಘ್ರಲಿಪಿಗಾರರು | ಒಂದು | 7275–13350 | |
| 6 | ಸಹಾಯಕರು | ಎರಡು | 7275–13350 | |
| 7 | ಬೆರಳಚ್ಚುಗಾರರು | ಮೂರು | 5800–10500 | |
| 8 | ಕಿರಿಯ ಸಹಾಯಕರು | ಒಂದು | 5800–10500 | |
| 9 | ಗ್ರೂಪ್ ಡಿ ನೌಕರರು | ಒಂದು | 5200–8200 | |

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರ ಆದೇಶ ಸಂಖ್ಯೆ : ಗ್ರಾಅಪ/03/ಆಂ.ಆ.ಸ./2011 ದಿನಾಂಕ : 1–4–2011ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ.ಎ. ಮೇಘಣ್ಣವರ**

**ನಿರ್ದೇಶಕರು**

ಗ್ರಾಮೀಣ ಮೂಲಭೂತ ಸೌಲಭ್ಯಗಳು

ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಪಿ.ಆರ್. 1179 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಂ.ಎ. ಮೊಹಮ್ಮದ್, ಪಿ.ಎಸ್.ಐ. ಹಲಸೂರು ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: 27/ಡಿಇ/1/ಆರ್ 6/2008, ದಿನಾಂಕ 22–9–2009.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ಇವರ ಆದೇಶ ಸಂಖ್ಯೆ : ಸಿಬಿ(8)91/2009–10, ದಿನಾಂಕ 07–08–2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 28–10–2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಸಿಬಿ(8)91/2009–10, ದಿನಾಂಕ 25–01–2011.

**ಪ್ರಸ್ತಾವನೆ :**

ಶ್ರೀ ಎಂ.ಎ. ಮೊಹಮ್ಮದ್, ಪಿ.ಎಸ್.ಐ. ಇವರು, ಬೆಂಗಳೂರಿನ ಬಾಣಸವಾಡಿ ಪೊಲೀಸ್ ಠಾಣೆಯಲ್ಲಿ, ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಕರ್ತವ್ಯ ಲೋಪವೆಸಗಿರುವ ಕಾರಣದ ಮೇಲೆ ಇತರೇ ಮೂವರು ಅಧಿಕಾರಿಗಳೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ**

> "ಶ್ರೀ ಎಂ.ಎ. ಮೊಹಮ್ಮದ್, ಪಿ.ಎಸ್.ಐ., ಬಾಣಸವಾಡಿ ಪೊಲೀಸ್ ಠಾಣೆ, ಬೆಂಗಳೂರು ನಗರ, ಆದ ನೀವು ಶ್ರೀ ರವಿ ಎಂಬುವವರು ಬಾಣಸವಾಡಿ ಠಾಣೆಗೆ ದಿನಾಂಕ 12–02–08 ರಂದು ಬೆಳಿಗ್ಗೆ 11–00 ಗಂಟೆಗೆ ನೀಡಿದ ಘೋರಾಪರಾಧದ ದೂರನ್ನು ಸಾಮಾನ್ಯ ಸ್ವರೂಪದ ದೂರನ್ನಾಗಿ ಪರಿವರ್ತಿಸಿ ಅನಗತ್ಯ ವಿಳಂಬ ಮಾಡಿ ಸಂಜೆ 5–15 ಗಂಟೆಗೆ ಠಾಣೆಯ ಮೊ.ಸಂ. 68/08 ಕಲಂ 379 ಭಾ.ದಂ.ಸಂ. ರೀತ್ಯಾ ಪ್ರಕರಣ ದಾಖಲು ಮಾಡಿರುತ್ತೀರಿ. ದೂರನ್ನು ಪಡೆಯುವ ಸಮಯದಲ್ಲಾಗಲೀ ಪ್ರಕರಣದ ತನಿಖೆ ನಡೆಸುವ ಸಮಯದಲ್ಲಾಗಲೀ, ಸ್ಥಳ ಪಂಚನಾಮೆ ಸಮಯದಲ್ಲಾಗಲಿ ಫಿರ್ಯಾದಿಯನ್ನು ವಿಚಾರಣೆ ಮಾಡಿ ನಿರ್ದಿಷ್ಟವಾಗಿ ಕಳುವಾದ ಮಾಲಿನ ಪೂರ್ಣ ಮೊತ್ತದ ಮಾಹಿತಿ ಪಡೆದು ಪ್ರಕರಣವನ್ನು ದಾಖಲಿಸದೆ, ಕಳುವಾದ ಮೊತ್ತ 60,000 ರೂ.ಗಳಾಗಿದ್ದು ತಾವು ಕಳುವಾಗಿರುವ ಮೊತ್ತ 45,000 ರೂ.ಗಳೆಂದು ಪ್ರಕರಣ ದಾಖಲು ಮಾಡಿಕೊಂಡು ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಕರ್ತವ್ಯಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲವೆಂದು ಸಲ್ಲಿಸಿದ ವರದಿಯನ್ನು ಒಪ್ಪದೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 22.09.2009ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಎರಡು ವರ್ಷಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ 07–08–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಹಾಗೂ ಕರ್ತವ್ಯಲೋಪ ಎಸಗಿರುವುದು ಕಂಡುಬಂದಿದ್ದು, ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 164 ಪೊಸಿಅ 2010, ಬೆಂಗಳೂರು, ದಿನಾಂಕ 20ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಎ. ಮೊಹಮ್ಮದ್, ಪಿ.ಎಸ್.ಐ. ಹಲಸೂರು ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 1186

## ENERGY SECRETARIAT

**Sub:** Enhancement of wind power capacity from 63.00 MW to 149.10 MW in favour of M/s Suzlon Infrastucture Limited – reg.

**Read:** 1. Government Order No : EN 297 NCE 2006 dated : 16-10-2006.

2. Letter No : KRED/08/SIL-Muddebihal (63 to 149.10 MW)/2011-790, dated 1/14.03.2011 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, sanction has been accorded for implementation of 63.00 MW capacity wind power project in favour of M/s Suzlon Infrastructure Limited at Kankal, Basarkad, Jalpur villages of Muddebihal Taluk of Bijapur District.

After the assessment of wind potential and flow of the wind in the allotted site, the Managing Director, Karnataka Renewable Energy Development Limited, Bangalore vide his letter read at (2) above has recommended to enhance the allotted wind power capacity from 63.00 MW to 149.10 MW in favour of M/s Suzlon Infrastructure Limited at Kankal, Basarkad, Jalpur villages of Muddebihal Taluk of Bijapur District.

The proposal has been examined in detail, hence the following Order :-

**GOVERNMENT ORDER NO.: EN 168 NCE 2011, BANGALORE, DATED: 19-04-2011**

Government accords approval for enhancement of wind power capacity from 63.00 MW to 149.10 MW in favour of M/s Suzlon Infrastructure Limited at Kankal, Basarkad, Jalpur villages of Muddebihal Taluk of Bijapur District as detailed below :

| Geographical Area details | Sanctioned capacity in MW | Enhancement proposed in stage-I in MW | No. of WTGs & rating in KW |
|---|---|---|---|
| The Identified area is a large plateau spread in the Northwest Southeast direction and held in between Kankal, Muddebihal and Jalapur and has a gentle elevation comparing to surrounding area. The average elevation of the area is about 600 m. The proposed area situated in the following Geographical co-ordinates :-<br>Latitude : 16°20'0" - 16°30'0"N<br>Longitude 70°0'0" - 76°13'2"E<br>Ridge Peaks ) 581, 600, 616, 615, 607, 593 & 601m Amsl | 63 | 86.10 | 149.10 MW (71x2100) |

The Government has reserved the power to cancel/modify this Order.

The other terms and conditions of the allotment Government Order shall IPSO FACTO applicable.

By Order and in the name of the Governor of Karnataka,

PR No. 1187

**SURESH B. KRISHNAPPANAVAR,**
Under Secretary to Government,
Energy Department.

## ಇಂಧನ ಸಚಿವಾಲಯ

**ವಿಷಯ :** M/s. SS Energy Ventures Private Limited ಇವರಿಗೆ 10 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/08/SSEVPL-10 MW/2010/3529, ದಿನಾಂಕ 15–11–2010/ 20–12–2010.

2. ದಿನಾಂಕ 25–01–2011 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s. SS Energy Ventures Private Limited ಇವರಿಗೆ ಬೆಳಗಾವಿ ಜಿಲ್ಲೆಯ, ಸೌದತ್ತಿ ತಾಲ್ಲೂಕಿನ ಉಗರಗೋಳ ಮತ್ತು ಬೆಟ್ಸೂರು ಗ್ರಾಮಗಳ ಆಸುಪಾಸಿನಲ್ಲಿ 10 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s. SS Energy Ventures Private Limited ಇವರಿಗೆ 10 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 511 ಎನ್‌ಸಿಇ 2010, ಬೆಂಗಳೂರು, ದಿನಾಂಕ 21ನೇ ಏಪ್ರಿಲ್ 2011**

M/s. SS Energy Ventures Private Limited ಇವರಿಗೆ ಗದಗ ಜಿಲ್ಲೆಯ, ಬೆಳಗಾವಿ ಜಿಲ್ಲೆಯ, ಸೌದತ್ತಿ ತಾಲ್ಲೂಕಿನ ಉಗರಗೋಳ ಮತ್ತು ಬೆಟ್ಸೂರು ಗ್ರಾಮಗಳ ಆಸುಪಾಸಿನಲ್ಲಿ 10 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :–

| Topo sheet No. | Proposed capacity in MW | Near by villages of the proposed area and District. | Geographical area description of the project |
|---|---|---|---|
| 48 M/2 | 10 MW (40 Nos. x 250 kw) | Ugaragola, Betsur villages in Saudatti Taluk, Belgaum District | The proposed area situated on the west of Ugaragola village and NE of Betsur village covered in 48 M/2. The area appears to be large plateau and has rocky status with open scrub feature. It has gentle elevation varying from 760 to 800m. The area is held in the following Geographical Co-ordinates :<br>Latitude : $15^o$43'34" - $15^o$44'48"N<br>Longitude $75^o$08'26" - $75^o$10'22"E<br>Ridge Peaks 800 & 713 Amsl |

1. ಸದರಿ ಯೋಜನೆಯನ್ನು financial closure ಸಾಧಿಸಿದ 24 ತಿಂಗಳುಗಳ ಒಳಗಾಗಿ ಪ್ರಾರಂಭ ಮಾಡತಕ್ಕದ್ದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ) |
|---|---|---|
| ➢ 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| ➢ 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| ➢ 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| ➢ 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ ಕಂದಾಯ/ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವಿದ್ಯುತ್ ಖರೀದಿ ಒಡಂಬಡಿಕೆ/ವೀಲಿಂಗ್ ಮತ್ತು ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.

10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆಗೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 1188

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ 2011–12 ರ ಹಣಕಾಸು ವರ್ಷದಲ್ಲಿ ಮೊದಲನೇ ಕಂತು ಹಣ ಸಹಾಯಾನುದಾನದ ಬಿಡುಗಡೆ ಕುರಿತು.

**ಪ್ರಸ್ತಾವನೆ :**

1. 2011–12ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳ ಸಂಪುಟ–7 ರಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಹಾಯಾನುದಾನ ಸಲುವಾಗಿ 408 ಲಕ್ಷ ರೂ.ಗಳ ಅವಕಾಶವನ್ನು ಕಲ್ಪಿಸಲಾಗಿದೆ. ಈ ಸಹಾಯಾನುದಾನವನ್ನು 4 ಕಂತುಗಳಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ.

2. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ 2011–12ನೇ ಸಾಲಿಗೆ ಮೊದಲನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನ ರೂ. 1,02,00,000/– ನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 21 ಪಿಎಸ್‌ಆರ್ 2011, ಬೆಂಗಳೂರು, ದಿನಾಂಕ 20ನೇ ಏಪ್ರಿಲ್ 2011**

ಸರ್ಕಾರವು, 2011–12 ನೇ ಹಣಕಾಸು ವರ್ಷದ ಮೊದಲನೇ ತ್ರೈಮಾಸಿಕ ಅವಧಿಗೆ **"**2801–80–101–1–07–101 ಸಹಾಯಾನುದಾನ (ಯೋಜನೇತರ)**"** ಲೆಕ್ಕ ಶೀರ್ಷಿಕೆಯಡಿ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ ರೂ. 1,02,00,000/– (ಒಂದು ಕೋಟಿ ಎರಡು ಲಕ್ಷ ರೂ.ಗಳು ಮಾತ್ರ) ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿದೆ.

ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 21 ಟಿಎಫ್‌ಪಿ 2006 ದಿನಾಂಕ 02–09–2006, ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ 16–05–2008, ಎಫ್‌ಡಿ 1 ಟಿಎಫ್‌ಪಿ 2010 ದಿನಾಂಕ 20–04–2010 ಮತ್ತು ಎಫ್‌ಡಿ 4 ಬಿಪಿಇ 2011 ದಿನಾಂಕ 31–03–2011 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 1189

## ಇಂಧನ ಸಚಿವಾಲಯ

**ವಿಷಯ :** M/s Kare Power Resources Private Limited ಇವರ 24.75 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶಕ್ಕೆ ಮಾಡಿರುವ ತಿದ್ದುಪಡಿಯನ್ನು ಹಿಂಪಡೆಯುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ ಇಎನ್ 312 ಎನ್‌ಸಿಇ 2010 ದಿನಾಂಕ 22–9–2010.
2. ತಿದ್ದುಪಡಿ ಆದೇಶ ಸಂಖ್ಯೆ ಇಎನ್ 447 ಎನ್‌ಸಿಇ 2010 ದಿನಾಂಕ 25–11–2010.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಪ್ರಧಾನ ವ್ಯವಸ್ಥಾಪಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಎಸ್‌ಹೆಚ್–651/2011/763, ದಿನಾಂಕ 10–03–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ M/s Kare Power Resources Private Limited ಇವರಿಗೆ ಗುಲ್ಬರ್ಗಾ (ಈಗಿನ ಯಾದಗಿರಿ ಜಿಲ್ಲೆ) ಜಿಲ್ಲೆಯ ಸುರಪುರ ತಾಲ್ಲೂಕಿನ ತಂಗರಬಾಲ್ ಗ್ರಾಮದ ಬಳಿ ಕೃಷ್ಣ ನದಿಗೆ ಅಡ್ಡಲಾಗಿ 24.75 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude : 16°15'6.5" Longitude : 76°25'00" Power House –Latitude : 16°16'00" Longitude 76°26'18") weir ನ ಪೂರ್ಣಮಟ್ಟ 424 ಮೀ. ಹಾಗೂ ಟೇಲ್ ವಾಟರ್ ಲೆವೆಲ್‌ನ ಮಟ್ಟ 404 ಮೀ. (the weir FRL to 424m with the TWL at 404m) ಸೀಮಿತಗೊಳಿಸಿ ಕೆಲವು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ತಿದ್ದುಪಡಿಯಲ್ಲಿ ಮೇಲಿನ ಆದೇಶ ಭಾಗದ ನಿಬಂಧನೆ 13ರಲ್ಲಿ ನಮೂದಿಸಲಾಗಿರುವ "The FRL of the weir of this project should be 424m with the TWL at 404m. At any reason this project should not overlap with the already commissioned project of Chayadevi MHS of M/s Bhoruka Power Corporation Limited."

ಎಂಬುದನ್ನು

"The FRL of the weir of this project should be 424m with the TWL at 392m. At any reason this project should not overlap with the already commissioned project of Chayadevi MHS of M/s Bhoruka Power Corporation Limited." ಎಂದು ತಿದ್ದುಪಡಿ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಪ್ರಧಾನ ವ್ಯವಸ್ಥಾಪಕರು ಮೇಲಿನ ತಿದ್ದುಪಡಿಯಿಂದ ಈಗಾಗಲೇ ಹಂಚಿಕೆಯಾಗಿರುವ ಮೆ॥ ಕೃಷ್ಣ ಹೈಡ್ರೋ ಎನರ್ಜಿ ಲಿ., ಇವರ ಗುಂತಗೋಳ ಕಿರು ಜಲ ವಿದ್ಯುತ್ ಯೋಜನೆಗೆ ತೊಂದರೆಯಾಗುವುದೆಂದು ತಿಳಿಸಿ ಹೊರಡಿಸಲಾಗಿರುವ ತಿದ್ದುಪಡಿಯನ್ನು ಹಿಂದಕ್ಕೆ ಪಡೆದು ಮೂಲ ಹಂಚಿಕೆ ಆದೇಶವನ್ನು ಯಥಾಸ್ಥಿತಿಯಲ್ಲಿ ಮುಂದುವರಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 447 ಎನ್‌ಸಿಇ 2010, ಬೆಂಗಳೂರು, ದಿನಾಂಕ 06ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಿನಾಂಕ 25–11–2010ರ ತಿದ್ದುಪಡಿ ಸಂಖ್ಯೆ ಇಎನ್ 447 ಎನ್‌ಸಿಇ 2010ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ ಹಾಗೂ M/s Kare Power Resources Private Limited ಇವರಿಗೆ ಗುಲ್ಬರ್ಗಾ (ಈಗಿನ ಯಾದಗಿರಿ ಜಿಲ್ಲೆ) ಜಿಲ್ಲೆಯ ಸುರಪುರ ತಾಲ್ಲೂಕಿನ ತಂಗರಬಾಲ್ ಗ್ರಾಮದ ಬಳಿ ಕೃಷ್ಣ ನದಿಗೆ ಅಡ್ಡಲಾಗಿ 24.75 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿರುವ ಸರ್ಕಾರಿ ಆದೇಶ ಸಂಖ್ಯೆ ಇಎನ್ 312 ಎನ್‌ಸಿಇ 2010 ದಿನಾಂಕ 22–09–2010ರ ಆದೇಶದಲ್ಲಿನ 13ನೇ ನಿಬಂಧನೆಯು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 1190

## ಇಂಧನ ಸಚಿವಾಲಯ

**ವಿಷಯ :** M/s. RBRK Investments Limited ಇವರಿಗೆ 19.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ.

**ಓದಲಾಗಿದೆ :**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್ಇಡಿ/08/ಆರ್‌ಬಿಆರ್‌ಕೆ–19.5 ಮೆ.ವ್ಯಾ./2010.3380, ದಿನಾಂಕ 10–11–2010/13–12–2010.
2. ದಿನಾಂಕ 25–01–2011 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s. RBRK Investments Limited ಇವರಿಗೆ ಬಿಜಾಪುರ ಜಿಲ್ಲೆಯ, ಬಸವನಬಾಗೇವಾಡಿ ತಾಲ್ಲೂಕಿನ ಬಸವನಬಾಗೇವಾಡಿ, ಮಣ್ಣೂರು, ಜೈನಾಪುರ ಮತ್ತು ಉಪ್ಪನದಿಣ್ಣೆ ತಾಂಡ ಗ್ರಾಮಗಳ ಆಸುಪಾಸಿನಲ್ಲಿ 19.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s. RBRK Investments Limited ಇವರಿಗೆ 19.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 492 ಎನ್‌ಸಿಇ 2010, ಬೆಂಗಳೂರು, ದಿನಾಂಕ 21ನೇ ಏಪ್ರಿಲ್ 2011**

M/s. RBRK Investments Limited ಇವರಿಗೆ ಬಿಜಾಪುರ ಜಿಲ್ಲೆಯ, ಬಸವನಬಾಗೇವಾಡಿ ತಾಲ್ಲೂಕಿನ ಬಸವನಬಾಗೇವಾಡಿ, ಮಣ್ಣೂರು, ಜೈನಾಪುರ ಮತ್ತು ಉಪ್ಪನದಿಣ್ಣೆ ತಾಂಡ ಗ್ರಾಮಗಳ ಆಸುಪಾಸಿನಲ್ಲಿ 19.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :–

| Topo sheet No. | Proposed capacity in MW | Near by villages of the proposed area and District. | Geographical area description of the project |
|---|---|---|---|
| 47 P/14 | 19.5 MW (78 Nos. x 250 KW) | Basavanabagewadi, Mannur, Jainapura and uppanadinni Tanda, Basavanabagewadi | It is a plain area and has no significant orientation located on the SW of Basavanabagewadi & spread around Mannur, Jainapura and Uppanadinni Tanda villages. It appears to be a agriculture land and part of the area has presence of gravel waste and power lines. The areas has gentle elevation varying from 580 to 600m. The area is held in the following Geographical |

ಒಂದು ದೊಡ್ಡ ಅವಿಭಕ್ತ/ಒಟ್ಟು ಕುಟುಂಬವನ್ನು ಪಡಿತರ ವ್ಯವಸ್ಥೆಗಾಗಿ ಒಂದು ಚಿಕ್ಕ ಸಂಸಾರಕ್ಕಾಗಿ ಸಮಾನವಾಗಿ ಪರಿಗಣಿಸುವುದು ಸಮಂಜಸವಾಗಲಾರದು. ಸಮಾಜದ ಎಲ್ಲಾ ಸದಸ್ಯರಿಗೂ ಸಾಕಷ್ಟು ಆಹಾರಧಾನ್ಯವನ್ನು ರಿಯಾಯಿತಿ ಬೆಲೆಯಲ್ಲಿ ತಲುಪಿಸಬೇಕು ಎನ್ನುವ ಸರ್ಕಾರದ ಮೂಲ ಉದ್ದೇಶ, ಈ ರೀತಿ ಮಾಡಿದಲ್ಲಿ ಸಫಲವಾಗಲಾರದು. ಆದರೆ ಒಂದು ಶ್ರೀಮಂತ ಒಟ್ಟು ಕುಟುಂಬ ಹೊಂದಿರಬಹುದಾದ ಹತ್ತಾರು ಎಕರೆ ಜಮೀನು ಅಥವಾ ದೊಡ್ಡ ವ್ಯಾಪಾರ–ವಹಿವಾಟನ್ನು ಅವಿಭಕ್ತ ಕುಟುಂಬದ ಮುಖ್ಯಸ್ಥರೊಬ್ಬರ ಹೆಸರಿಗೆ ಮಾತ್ರ ತೋರಿಸಿ, ಆತನಿಗೆ ಎ.ಪಿ.ಎಲ್ ಪಡಿತರ ಚೀಟಿ ನೀಡಿ, ವಿವಾಹಿತ ಗಂಡು ಮಕ್ಕಳನ್ನು ಆಸ್ತಿ ರಹಿತರೆಂದು ಪರಿಗಣಿಸಿ ಬಿಪಿಎಲ್ ಪಡಿತರ ಚೀಟಿಗಳನ್ನು ನೀಡುವುದು ಸಹ ಸಮಂಜಸವಾಗಲಾರದು.

**ಸರ್ಕಾರಿ ಆದೇಶ ಸಂಖ್ಯೆ : ಆನಾಸ 260 ಡಿಆರ್ಎ 2010, ಬೆಂಗಳೂರು, ದಿನಾಂಕ:30.03.2011.**

ಈ ಮೇಲೆ ಹೇಳಿದ ವಾಸ್ತವಾಂಶಗಳನ್ನು ಗಮನದಲ್ಲಿಟುಕೊಂಡು, ಒಟ್ಟು ಅಥವಾ ಅವಿಭಕ್ತ ಕುಟುಂಬಕ್ಕೆ ಪಡಿತರ ಚೀಟಿ ನೀಡುವಲ್ಲಿ ಅನುಸರಿಸಬೇಕಾದ ನೀತಿಯನ್ನು ಈ ಕೆಳಗೆ ನೀಡಲಾಗಿದೆ:

ಅ) ಒಂದು ಕುಟುಂಬದಲ್ಲಿ, ಒಂದಕ್ಕಿಂತ ಹೆಚ್ಚು ತಲೆಮಾರಿನ ಸದಸ್ಯರಿದ್ದು ಅಥವಾ ಒಂದೆ ತಲೆಮಾರಿನ ಸಹೋದರರಿದ್ದು, ಒಂದು ಅವಿಭಾಜ್ಯ ಪಿತ್ರಾರ್ಜಿತ ಆಸ್ತಿ ಅಥವಾ ವ್ಯಾಪಾರ–ವಹಿವಾಟು ಅವರ ಆದಾಯ ಮೂಲ ಆಗಿದ್ದಲ್ಲಿ, ಅಥವಾ ಅದರಲ್ಲಿ ಹಕ್ಕಿದ್ದಲ್ಲಿ, ಅಂತಹ ಕುಟುಂಬದ ಸದಸ್ಯರು ಒಂದು ಮನೆಯಲ್ಲಿ ವಾಸವಾಗಿರಲಿ, ಅಥವಾ ಪ್ರತ್ಯೇಕವಾಗಿ ವಾಸವಾಗಿರಲಿ, ಪಡಿತರ ವ್ಯವಸ್ಥೆಯ ಮಟ್ಟಿಗೆ ಅಂತಹ ಕುಟುಂಬವನ್ನು ಒಂದು ಅವಿಭಕ್ತ ಅಥವಾ ಒಟ್ಟು ಕುಟುಂಬ ಎಂದು ಪರಿಗಣಿಸಲಾಗುವುದು.

ಆ) ಒಂದು ಅವಿಭಕ್ತ/ಒಟ್ಟು ಕುಟುಂಬವು ಬಡತನ ರೇಖೆಗಿಂತ ಮೇಲಿದ್ದಾರೋ ಅಥವಾ ಕೆಳಗಿದ್ದಾರೋ ಎಂದು ನಿರ್ಧರಿಸಲು ಸಾಧ್ಯವಾಗುವಂತೆ ಅಂತಹ ಕುಟುಂಬದ ಎಲ್ಲಾ ಸದಸ್ಯರ ಆದಾಯವನ್ನು ಗಣನೆಗೆ ತೆಗೆದುಕೊಳ್ಳಲಾಗುವುದು.

ಇ) ಒಂದು ಅವಿಭಕ್ತ/ಒಟ್ಟು ಕುಟುಂಬದ ಆದಾಯ ಮೂಲವಾದ ಕೃಷಿ ಭೂಮಿ ಅಥವಾ ವ್ಯಾಪಾರ–ವಹಿವಾಟು ಅವಿಭಕ್ತ ಕುಟುಂಬದ ಯಜಮಾನ ಅಥವಾ 'ಕರ್ತ'ನ ಹೆಸರಿನಲ್ಲಿ ಇದ್ದರೂ, ಅದರಲ್ಲಿ ಎಲ್ಲಾ ಗಂಡು ಮಕ್ಕಳಿಗೂ ಸಮಪಾಲು ಇರುವುದರಿಂದ, ಅದರಿಂದ ಬರುವ ಆದಾಯವನ್ನು ಒಟ್ಟು ಕುಟುಂಬದ ಎಲ್ಲಾ ಸದಸ್ಯರ ಆದಾಯವೆಂದು ಪರಿಗಣಿಸತಕ್ಕದ್ದು.

ಈ) ಅವಿಭಕ್ತ ಕುಟುಂಬದ ಆದಾಯ ಮೂಲವು ಒಂದಾಗಿದ್ದರೂ, ಒಂದು ಅವಿಭಕ್ತ ಕುಟುಂಬದ ವಿವಾಹಿತ ಗಂಡು ಮಕ್ಕಳು ಬಯಸಿದಲ್ಲಿ, ಪ್ರತ್ಯೇಕ ಪಡಿತರ ಚೀಟಿಗಳನ್ನು ನೀಡಬಹುದು. ಆದರೆ, ಕಂಪ್ಯೂಟರ್ 'ಡಾಟಾ ಬೇಸ್'ನಲ್ಲಿ ಅವಿಭಕ್ತ ಕುಟುಂಬದ ಎಲ್ಲಾ ಸದಸ್ಯರ ಮಾಹಿತಿಯನ್ನು ಒಂದೇ ಕಡೆ ಇಡತಕ್ಕದ್ದು. ಅವಿಭಕ್ತ/ಒಟ್ಟು ಕುಟುಂಬಕ್ಕೆ ಸೇರಿದ ಆಸ್ತಿ ಅಥವಾ ವ್ಯವಹಾರ ಯಾವ ಸದಸ್ಯನ ಹೆಸರಿನಲ್ಲಿ ಇದೆಯೊ, ಆತನ ಹೆಸರಿಗೆ ನೀಡುವ ಪಡಿತರ ಚೀಟಿಯಲ್ಲಿ, ಪ್ರಾಮುಖ್ಯವಾಗಿ "ಮುಖ್ಯ ಕುಟುಂಬ" – "ಉಪ–ಕುಟುಂಬಗಳಿಗೆ ಪ್ರತ್ಯೇಕ ಕಾರ್ಡು ನೀಡಲಾಗಿದೆ" ಎಂದು ನಮೂದಿಸತಕ್ಕದ್ದು. ಉಪ ಕುಟುಂಬಗಳಿಗೆ ನೀಡುವ ಕಾರ್ಡುಗಳ ಮೇಲೆ "ಉಪ ಕುಟುಂಬ" – "ಮುಖ್ಯ ಕುಟುಂಬಕ್ಕೆ ಪ್ರತ್ಯೇಕ ಕಾರ್ಡು ನೀಡಲಾಗಿದೆ" ಎಂದು ಮುದ್ರಿಸತಕ್ಕದ್ದು. ಮುಖ್ಯ ಕುಟುಂಬ ಮತ್ತು ಉಪ ಕುಟುಂಬಗಳಿಗೆ ನೀಡುವ ಕಾರ್ಡುಗಳ ಸಂಖ್ಯೆ ಒಂದೇ ಆಗಿರತಕ್ಕದ್ದು. ಆದರೆ, ಮುಖ್ಯ ಕುಟುಂಬದ ಕಾರ್ಡ್‌ನ ಸಂಖ್ಯೆ ಮುಂದೆ MF ಎಂದೂ, 1ನೇ ಉಪ ಕುಟುಂಬದ ಕಾರ್ಡ್‌ನ ಸಂಖ್ಯೆ ಮುಂದೆ SFI ಎಂದೂ, ಎರಡನೆ ಉಪ ಕುಟುಂಬದ ಕಾರ್ಡ್‌ನ ಸಂಖ್ಯೆ ಮುಂದೆ SF2 ಎಂದೂ, ಮೂರನೇ ಉಪ ಕುಟುಂಬದ ಕಾರ್ಡ್‌ನ ಸಂಖ್ಯೆ ಮುಂದೆ SF3 ಎಂದೂ, ಇತ್ಯಾದಿಯಾಗಿ ನಮೂದಿಸತಕ್ಕದ್ದು.

ಉ) ಒಂದು ಅವಿಭಕ್ತ ಕುಟುಂಬವು ಬಡತನ ರೇಖೆಗಿಂತ ಕೆಳಗೆ ಇದೆಯೆಂದು ಪರಿಗಣಿಸಲ್ಪಟ್ಟಲ್ಲಿ ಮತ್ತು ಒಂದು ಪಡಿತರ ಚೀಟಿಯನ್ನು ಬಯಸಿದಲ್ಲಿ, ಅಂತಹ ಅವಿಭಕ್ತ ಕುಟುಂಬದ ಯಜಮಾನ, ಆತನ ಹೆಂಡತಿ ಹಾಗೂ ಅವರ ಅವಿವಾಹಿತ ಮಕ್ಕಳನ್ನು ಒಂದು ಚಿಕ್ಕ ಕುಟುಂಬಕ್ಕೆ ಸಮಾನಾಂತರವೆಂದು ಪರಿಗಣಿಸಿ ಪಡಿತರ ಲೆಕ್ಕ ಹಾಕತಕ್ಕದ್ದು. ಅಂತಹ ಒಂದು ಅವಿಭಕ್ತ ಕುಟುಂಬದಲ್ಲಿ ಇಬ್ಬರು ವಿವಾಹಿತ ಗಂಡು ಮಕ್ಕಳು ಇದ್ದರೆ ಎರಡು ಚಿಕ್ಕ ಕುಟುಂಬಗಳಿಗೆ ನೀಡುವ ಆಹಾರಧಾನ್ಯ ಇತ್ಯಾದಿಗಳನ್ನೂ ಮೂರು ವಿವಾಹಿತ ಮಕ್ಕಳು ಇದ್ದರೆ, ಮೂರು ಚಿಕ್ಕ ಕುಟುಂಬಗಳಿಗೆ ನೀಡುವ ಆಹಾರಧಾನ್ಯ ಇತ್ಯಾದಿಗಳ ಪಡಿತರ ನೀಡತಕ್ಕದ್ದು.

ಊ) ಒಂದು ಅವಿಭಕ್ತ ಕುಟುಂಬ ಬಡತನ ರೇಖೆಗಿಂತ ಕೆಳಗೆ ಇದೆಯೆಂದು ಪರಿಗಣಿಸಲ್ಪಟ್ಟಲ್ಲಿ ಮತ್ತು "ಮುಖ್ಯ ಕುಟುಂಬ" ಮತ್ತು "ಉಪ ಕುಟುಂಬ" ಗಳಿಗೆ ಪ್ರತ್ಯೇಕ ಕಾರ್ಡುಗಳನ್ನು ನೀಡಲ್ಪಟ್ಟಲ್ಲಿ, ಮುಖ್ಯ ಕುಟುಂಬ ಮತ್ತು ಉಪ ಕುಟುಂಬಗಳನ್ನು ಪ್ರತ್ಯೇಕ ಚಿಕ್ಕ ಕುಟುಂಬಗಳು ಎಂದು ಪರಿಗಣಿಸಿ, ಪಡಿತರ ಲೆಕ್ಕ ಹಾಕತಕ್ಕದ್ದು ಮತ್ತು ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಸೋಮಣ್ಣ**

ಪಿ.ಆರ್ 1134

ಸರ್ಕಾರದ ಅಧೀನ ಕಾರ್ಯದರ್ಶಿ

ಆಹಾರ, ನಾಗರೀಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ನಾಗರಾಜಪ್ಪ, ಸಿ.ಹೆಚ್.ಸಿ.–51, ಬೆಳ್ಳೂರು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(2)/ಪಿಆರ್/89/2009–10 (ಓ.ಬಿ.ಸಂ. 353/09–10) ದಿ: 08–02–2010
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು (73)/2009–10 (ಓ.ಬಿ. 07/2010–11) ದಿ:19–6–2010
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 13–7–2010
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)/36/2010–11 ದಿನಾಂಕ: 05–10–2010

**ಪ್ರಸ್ತಾವನೆ:**

ಶ್ರೀ ನಾಗರಾಜಪ್ಪ, ಸಿ.ಹೆಚ್.ಸಿ.–51, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ), ಇವರನ್ನು ನಾಗಮಂಗಲ ಗ್ರಾಮಾಂತರ ಪೊಲೀಸ್ ಠಾಣೆಯಿಂದ ಬೆಳ್ಳೂರು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆಗೆ ವರ್ಗಾವಣೆಯಾದ ಸಂದರ್ಭದಲ್ಲಿ ಗೈರುಹಾಜರಾಗಿ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

**"**ಶ್ರೀ ನಾಗರಾಜಪ್ಪ, ಸಿ.ಹೆಚ್.ಸಿ.–51, ಆಗಿ ಈ ಹಿಂದೆ ನಾಗಮಂಗಲ (ಗ್ರಾ) ಪೊಲೀಸ್ ಠಾಣೆ, ಹಾಲಿ ಬೆಳ್ಳೂರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನೀವು ಮೇಲಧಿಕಾರಿಗಳ ಅನುಮತಿ ಪಡೆಯದೆ, ಅಥವಾ ಯಾವುದೇ ರಜೆ ಅರ್ಜಿ ಸಲ್ಲಿಸದೆ ಠಾಣೆಯಿಂದ ಎಂ.ಹೆಚ್.ಎಸ್. ಪಡೆಯದೆ ದಿನಾಂಕ: 01–8–2009 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದು, ನಿಮ್ಮನ್ನು ನಾಗಮಂಗಲ (ಗ್ರಾ) ಠಾಣೆಯಿಂದ ಬೆಳ್ಳೂರು ಠಾಣೆಗೆ ವರ್ಗಾವಣೆ ಮಾಡಿದ್ದ ನಿಮ್ಮನ್ನು ನಾಗಮಂಗಲ (ಗ್ರಾ) ಠಾಣಾಧಿಕಾರಿಗಳು ದಿನಾಂಕ: 06–8–2009ರಂದು ಬಿಡುಗಡೆ ಮಾಡಿ ಪಾಸ್‌ಪೋರ್ಟನ್ನು ಬೆಳ್ಳೂರು ಪೊಲೀಸ್ ಠಾಣೆಗೆ ಸಿಪಿಸಿ–14 ರವರ ಮೂಲಕ ಕಳುಹಿಸಿಕೊಟ್ಟಿದ್ದು, ನೀವು ಬೆಳ್ಳೂರು ಪೊಲೀಸ್ ಠಾಣೆಗೆ ಕರ್ತವ್ಯಕ್ಕೆ ದಿನಾಂಕ: 02–9–2009 ರಂದು ವರದಿ ಮಾಡಿಕೊಂಡಿರುತ್ತೀರಿ. ನೀವು ದಿನಾಂಕ: 06–8–2009 ರಿಂದ 16–8–2009ರ ವರೆಗೆ 10 ದಿವಸಗಳ ಕಾಲ ಸೇರುವಿಕೆ ಕಾಲ ಉಪಯೋಗಿಸಿದ್ದರೂ ಸಹಾ ದಿ: 17–8–2009 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳಬೇಕಿತ್ತು. ಆದರೆ ನೀವು ದಿನಾಂಕ: 02–9–2009 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತೀರಿ. ಹೀಗೆ ನೀವು ದಿ: 01–8–2009 ರಿಂದ 01–9–2009ರ ವರೆಗೆ ಒಟ್ಟು 32 ದಿವಸಗಳು ಕರ್ತವ್ಯಕ್ಕೆ ಅನಧಿಕೃತವಾಗಿ ವರ್ಗಾವಣೆಯಾದ ಸಮಯದಲ್ಲಿ ಗೈರುಹಾಜರಾಗಿದ್ದು, ಹೀಗೆ ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಅಶಿಸ್ತು ಪ್ರದರ್ಶಿಸಿರುತ್ತೀರಿ.**"**

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 08–02–2010ರ ಆದೇಶದಲ್ಲಿ ಅರ್ಜಿದಾರರಿಗೆ **"ಎಚ್ಚರಿಕೆ"** ನೀಡಲಾಗಿದೆ. ಕರ್ತವ್ಯಕ್ಕೆ ಗೈರುಹಾಜರಾದ ದಿನಾಂಕ: 01–8–09 ರಿಂದ 01–9–2009ರ ವರೆಗಿನ ಒಟ್ಟು 32 ದಿನಗಳನ್ನು ಕೆ.ಸಿ.ಎಸ್. ನಿಯಮ 106(ಎ) ರೀತ್ಯಾ **ವೇತನ ರಹಿತ ರಜೆ** ಎಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 19–6–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 119 ಪೊಸಿಅ 2010 ಬೆಂಗಳೂರು, ದಿನಾಂಕ: 06–4–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ನಾಗರಾಜಪ್ಪ, ಸಿ.ಹೆಚ್.ಸಿ.–51, ಬೆಳ್ಳೂರು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು)

ಪಿ.ಆರ್ 1135

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ಸಿ. ಸಚ್ಚಿದಾನಂದ, ನಿವೃತ್ತ ಪಿ.ಎಸ್.ಐ, ರಾಜ್ಯ ಗುಪ್ತವಾರ್ತೆ, ಮಳವಳ್ಳಿ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿಯ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ(12)/2008-09 (ಓ.ಐ.21/09-2010) ದಿನಾಂಕ: 30-01-2010
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು (4)/76/09-10 ಓ.ಐ: 10/2010-11 ದಿ: 22-6-2010
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 23-9-2010
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)/60/2010-11 ದಿನಾಂಕ: 22-12-2010

**ಪ್ರಸ್ತಾವನೆ:**

ಶ್ರೀ ಸಿ. ಸಚ್ಚಿದಾನಂದ, ರವರು ಮದ್ದೂರು ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಗೈರುಹಾಜರಾಗಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ಅಶಿಸ್ತು ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ನೀವು ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು, ಶಿಸ್ತಿನ ಇಲಾಖೆಯಲ್ಲಿದ್ದು ದಿ: 21-9-2008 ರಂದು ಬೆಳಿಗ್ಗೆ 10.00 ಗಂಟೆಯ ಸಮಯದಲ್ಲಿ ನೀವು **"ಚರ್ಚ್ ಕಡೆಗೆ ರೌಂಡ್ಸ್‌ಗೆ ಹೋಗಿರುತ್ತೇನೆ"** ಎಂಬುದಾಗಿ ಠಾಣಾ ದಿನಚರಿಯಲ್ಲಿ ನಮೂದಿಸಿ ಹೋದವರು ಠಾಣೆಗೆ ವಾಪಸ್ ಬಾರದೆ ನಿಮ್ಮ ಇರುವಿಕೆಯ ಬಗ್ಗೆ ಹಿರಿಯ ಅಧಿಕಾರಿಗಳಿಗೆ ಮಾಹಿತಿ ನೀಡದೆ, ಕಾರ್ಯಸ್ಥಾನದಲ್ಲಿ ಇರದೆ, ಹಿರಿಯ ಅಧಿಕಾರಿಗಳ ಪೂರ್ವಾನುಮತಿ ಪಡೆಯದೆ ಕರ್ತವ್ಯಕ್ಕೆ ಗೈರುಹಾಜರಾಗಿರುತ್ತೀರಿ. ದಿನಾಂಕ: 23-9-08 ರಂದು ಬೆಳಗ್ಗೆ 9-50 ಗಂಟೆಗೆ ಸಿಪಿಐ, ಮದ್ದೂರು ವೃತ್ತರವರು ನಿಮಗೆ ನಿಸ್ತಂತು ಮುಖಾಂತರ ಕರೆ ಮಾಡಿದಾಗಲೂ, ನೀವು ಉತ್ತರಿಸದೆ ನಿಮ್ಮ ಇರುವಿಕೆಯ ಬಗ್ಗೆ ಯಾವುದೇ ಮಾಹಿತಿ ನೀಡದಿರುವ ಬಗ್ಗೆ ಸಿಪಿಐ ಮದ್ದೂರು ವೃತ್ತ ರವರು ನಿಮ್ಮ ಗೈರು ಹಾಜರಿಯ ಬಗ್ಗೆ ನಿಸ್ತಂತು ಮುಖಾಂತರ ಮಾನ್ಯ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆರವರಿಗೆ ನಿವೇದಿಸಿಕೊಂಡಿದ್ದರ ಮೇರೆಗೆ ಜಿಲ್ಲಾ ಪೊಲೀಸ್ ಕಛೇರಿ ಆದೇಶ ಸಂಖ್ಯೆ: ಸಿಬ್ಬಂದಿ (2) 115/2008-09 ಆದೇಶ ಸಂಖ್ಯೆ: 223/08-09 ದಿ: 23-9-08 ರೀತ್ಯಾ ದಿ: 23-09-09 ರಿಂದ ಅಮಾನತ್ತಿನಲ್ಲಿದ್ದು ವಲಯ ಕಛೇರಿ ಆದೇಶ ಸಂಖ್ಯೆ : ಸಿಬ್ಬಂದಿ/12/2008-09 ರಲ್ಲಿ ಪ್ರಧಾನ ಕಛೇರಿ ಪತ್ರ ಸಂಖ್ಯೆ: ಅಪೀಲು (1)46/2008-09 ದಿ: 07-3-2009ರಲ್ಲಿ ನೀಡಿರುವ ನಿರ್ದೇಶನದ ಪ್ರಕಾರ ದಿನಾಂಕ: 19-3-2009ರ ಪತ್ರದಲ್ಲಿ ನಿಮ್ಮನ್ನು ಇಲಾಖಾ ವಿಚಾರಣೆ ಬಾಕಿ ಇರುವಂತೆಯೇ ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಿಂದ ಬಿಡುಗಡೆ ಮಾಡಿ ತಮ್ಮ ಹೊಸ ಹುದ್ದೆಗೆ (ರಾಜ್ಯಗುಪ್ತ ವಾರ್ತೆ, ಕೊಡಗು ಜಿಲ್ಲೆ) ಹೋಗಿ ವರದಿ ಮಾಡಿಕೊಳ್ಳಲು ಆದೇಶಿಸಿದ್ದು, ಸದರಿ ಅಮಾನತ್ತಿನ ಬಿಡುಗಡೆ ಪತ್ರವನ್ನು ದಿನಾಂಕ: 08-4-2009 ರಂದು ನೀವು ಸ್ವೀಕರಿಸಿದರೂ ಸಹ ನೇಮಕವಾದ ಸ್ಥಳದಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ದಿ: 08-4-2009 ರಿಂದ 06-9-2009 ರವರೆಗೆ ಒಟ್ಟು 151 ದಿವಸಗಳ ಕಾಲ ಗೈರು ಹಾಜರಾಗಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಅಶಿಸ್ತು ಹಾಗೂ ಬೇಜವಾಬ್ದಾರಿತನವನ್ನು ತೋರಿಸಿರುತ್ತೀರಿ"

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ: 30-01-2010ರ ಆದೇಶದಲ್ಲಿ ಅರ್ಜಿದಾರರ ದಿನಾಂಕ: 23-9-2008 ರಿಂದ 08-4-2009ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಮತ್ತು ದಿ: 21-9-08 ರಿಂದ 22-9-2008 ಮತ್ತು 08-4-09 ರಿಂದ 06-9-2009ರ ವರೆಗಿನ ಗೈರುಹಾಜರಿಯ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 22-6-2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 153 ಪೊಸಿಅ 2010 ಬೆಂಗಳೂರು, ದಿನಾಂಕ: 06-4-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ. ಸಚ್ಚಿದಾನಂದ, ನಿವೃತ್ತ ಪಿ.ಎಸ್.ಐ., ಗುಪ್ತವಾರ್ತೆ, ಮಳವಳ್ಳಿ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ. ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು)

ಪಿ.ಆರ್ 1136

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ವೈ. ಎಸ್. ನಾಯಕ್, ಮಾಜಿ ಪಿ.ಸಿ. ಮಾರ್ಕೆಟ್ ಪೊಲೀಸ್ ಠಾಣೆ, ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿಯ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರ ಆದೇಶ ಸಂಖ್ಯೆ: ಪಿಯುಎನ್/36/97(ಓ.ಬಿ:1419/97) ದಿನಾಂಕ: 29–12–97
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು/25/ಉವ/02–03 ದಿ: 07–8–2003
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 12–3–2010
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)/1/2010–11 ದಿನಾಂಕ: 24–8–2010

**ಪ್ರಸ್ತಾವನೆ:**

ಶ್ರೀ ವೈ. ಎಸ್. ನಾಯಕ್, ಇವರು ಬೆಳಗಾವಿಯ ಮಾರ್ಕೆಟ್ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**<u>ದೋಷಾರೋಪಣೆ:</u>**

" ಆ.ಪೊ.ಅ. ಗಳಾದ ನೀವು ಸಿ.ಪಿ.ಸಿ. 569, ವಾಯ್ ಎಸ್. ನಾಯಕ ಮಾರ್ಕೆಟ್ ಪೊಲೀಸ್ ಠಾಣೆ, ನೀವು ಮಾರ್ಕೆಟ್ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ನೀವು ದಿನಾಂಕ: 15–5–97 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರ ಉಳಿದು 21 ದಿನಗಳು ಮೇಲ್ಪಟ್ಟಿದ್ದರಿಂದ ನಿಮಗೆ ಪರಿತ್ಯಾಗ ಸೂಚನಾ ಪತ್ರವನ್ನು ಹೊರಡಿಸಿದ್ದು ನೀವು ಅದನ್ನು ಸ್ವೀಕರಿಸಿ ದಿ:22–6–97ರಿಂದ 7 ದಿವಸಗಳಲ್ಲಿ ಮಾನ್ಯ ಎಸ್.ಪಿ. ಸಾ: ಬೆಳಗಾವಿ ರವರ ಮುಂದೆ ಇಲ್ಲವೆ ಕರ್ತವ್ಯಕ್ಕೆ ಆಗಲಿ ಹಾಜರಾಗದೆ ಗೈರ ಹಾಜರ ಉಳಿದಿದ್ದೀರಿ ಹಾಗೂ ಮೇಲಧಿಕಾರಿಗಳ ಆದೇಶವನ್ನು ಉಲ್ಲಂಘನೆ ಮಾಡಿ ನಿಮ್ಮ ಕರ್ತವ್ಯದಲ್ಲಿ ಘೋರ ನಿರ್ಲಕ್ಷತನ ದುರ್ನಡತೆ ಹಾಗೂ ವಿಮುಖತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 29–12–97ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ. ದಿನಾಂಕ: 15–5–97 ರಿಂದ 16–9–97 ರವರೆಗೆ ಅನಧಿಕೃತವಾಗಿ ಗೈರು ಹಾಜರಾದ 125 ದಿನಗಳನ್ನು ಸಂಬಳರಹಿತ ರಜೆ ಎಂದು ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 07–8–2003ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಘೋರ ನಿರ್ಲಕ್ಷತನ ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 48 ಪೊಸಿಅ 2010 ಬೆಂಗಳೂರು, ದಿನಾಂಕ: 05–4–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವೈ.ಎಸ್, ನಾಯಕ್, ಮಾಜಿ ಪಿ.ಸಿ. ಮಾರ್ಕೆಟ್ ಪೊಲೀಸ್ ಠಾಣೆ, ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು)

ಪಿ.ಆರ್ 1137

## ಯುವಜನ ಸೇವಾ ಸಚಿವಾಲಯ

**ವಿಷಯ** : ಶ್ರೀ ಹೆಚ್. ಬಸವರಾಜ ಹಡಪದ, ಸಹಾಯಕ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಧಾರವಾಡ, ಇವರ ವಿರುದ್ಧ ಇಲಾಖಾ ವಿಚಾರಣೆ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಸಂಖ್ಯೆ: ಡಿವೈಎಸ್ ಎಸ್/ಸಿ3/31/10–11, ದಿನಾಂಕ: 23–09–2010

2. ಶ್ರೀ ಹೆಚ್. ಬಸವರಾಜ ಹಡಪದ, ಸಹಾಯಕ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಇವರ ಉತ್ತರ ದಿನಾಂಕ: 25–11–2010.

**ಪ್ರಸ್ತಾವನೆ:**

ಶ್ರೀ ಹೆಚ್. ಬಸವರಾಜ ಹಡಪದ, ಸಹಾಯಕ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಧಾರವಾಡ, ಇವರು ಬೆಳಗಾವಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸಾಮಾನ್ಯ ನಗದು ಪುಸ್ತಕ, ಬ್ಯಾಂಕ್ ನಗದು ಪುಸ್ತಕ ಹಾಗೂ ಕ್ರೀಡಾ ಹಾಸ್ಟೆಲ್ ನಗದು ಪುಸ್ತಕವನ್ನು ಬರೆದಿರದ; ವಿವಿಧ ಬಾಬ್ತುಗಳಿಗೆ ಡ್ರಾ ಮಾಡಲಾದ ರೂ. 18,74,226/–(ಹದಿನೆಂಟು ಲಕ್ಷದ ಎಪ್ಪತ್ನಾಲ್ಕು ಸಾವಿರದ ಎರಡು ನೂರ ಇಪ್ಪತ್ತಾರು ರೂಪಾಯಿಗಳು ಮಾತ್ರ) ಗಳಿಗೆ ಲೆಕ್ಕಪತ್ರವನ್ನು ಹಾಜರುಪಡಿಸದ; ಮಾರ್ಚ್ 2009ರಲ್ಲಿ ಅನುದಾನವನ್ನು ಎ.ಸಿ. ಬಿಲ್ಲಿನಲ್ಲಿ ಸೆಳೆದು, ಈ ಕುರಿತಾದ 16 ಎನ್.ಡಿ.ಸಿ. ಬಿಲ್ಲುಗಳನ್ನು ಜಿಲ್ಲಾ ಪಂಚಾಯತ್, ಬೆಳಗಾವಿ, ಇವರಿಗೆ ಸಲ್ಲಿಸದ; ತಾಲ್ಲೂಕು ಕ್ರೀಡಾಂಗಣದ ನಗದು ಪುಸ್ತಕವನ್ನು ವರ್ಷಾನುಗಟ್ಟಲೇ ಬರೆಯದ, ಬ್ಯಾಂಕ್ ಪಾಸ್ ಪುಸ್ತಕ ಮತ್ತು ನಗದು ಪುಸ್ತಕಗಳ ವ್ಯತ್ಯಾಸ ಹಾಗೂ ಡ್ರಾ ಮಾಡಿದ ಹಣವನ್ನು ಮರು ಹೊಂದಾಣಿಕೆ ಮಾಡದ; ಬೆಳಗಾವಿ ಜಿಲ್ಲಾ ಕ್ರೀಡಾಂಗಣದ ಬಾಡಿಗೆಯಿಂದ ಬಂದ ಆದಾಯದ ಪೂರ್ಣ ವಿವರಗಳನ್ನು ಒದಗಿಸದ; 2006–07ನೇ ಸಾಲಿನ ರಾಜ್ಯವಲಯದ ಯೋಜನೆಯಡಿಯಲ್ಲಿ ಗ್ರಾಮೀಣ ಕ್ರೀಡಾ ಸಂಘಗಳಿಗೆ ಕ್ರೀಡಾ ಸಾಮಗ್ರಿಗಳನ್ನು ಸರಬರಾಜು ಮಾಡಲು ಮಂಜೂರಾದ ರೂ.1.50 ಲಕ್ಷಗಳ ಅನುದಾನವನ್ನು ವಿಭಜಿಸಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಅಧಿನಿಯಮಗಳನ್ನು ಉಲ್ಲಂಘಿಸಿ ಎರಡು ಸಲ ಸಾಮಗ್ರಿಗಳನ್ನು ಖರೀದಿಸಿದ; ಇಲಾಖೆಯ ಮಾರ್ಗಸೂಚಿಯನ್ವಯ ಆಟದ ಮೈದಾನದ ಅಭಿವೃದ್ಧಿಗಾಗಿ ಗರಿಷ್ಠ 10.00 ಲಕ್ಷಗಳನ್ನು ಬಿಡುಗಡೆಗೊಳಿಸಬಹುದಾಗಿದ್ದು, ಇದನ್ನು ಉಲ್ಲಂಘಿಸಿ ಗೋಕಾಕ್ ತಾಲ್ಲೂಕಿನ ವನಕೊಪ್ಪಿ ಗ್ರಾಮದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗೆ ರೂ. 17,60,000/– (ಹದಿನೇಳು ಲಕ್ಷದ ಅರವತ್ತು ಸಾವಿರ ರೂಪಾಯಿಗಳು ಮಾತ್ರ) ಹೆಚ್ಚುವರಿಯಾಗಿ ಅನುದಾನ ಬಿಡುಗಡೆ ಮಾಡಿದ; 2006–07ನೇ ಸಾಲಿನಲ್ಲಿ ಸಂಸದರ ಸ್ಥಳೀಯ ಅಭಿವೃದ್ಧಿ ನಿಧಿಯ ಅನುದಾನದಿಂದ 5 ಸಂಘಗಳಿಗೆ ನೀಡಲು ಜಿಮ್ ಸಾಮಗ್ರಿಗಳನ್ನು ಸ್ಪರ್ಧಾತ್ಮಕ ದರಗಳು ಇಲ್ಲದೇ ಖರೀದಿಸಿದ; 2008–09ನೇ ಸಾಲಿನ ದಸರಾ ಕ್ರೀಡಾ ಕೂಟ ಮುಂಗಡ ಹಣದಲ್ಲಿ ಉಳಿದ ರೂ. 46,567/–ಗಳನ್ನು (ನಲವತ್ತಾರು ಸಾವಿರದ ಐದುನೂರ ಅರವತ್ತೇಳು ರೂಪಾಯಿಗಳು ಮಾತ್ರ) ಉಳಿತಾಯ ಖಾತೆಗೆ ಜಮಾ ಮಾಡದ ಹಾಗೂ ಜಿಲ್ಲಾ ಯುವಜನ ಸೇವಾ ಮತ್ತು ಕ್ರೀಡಾ ಮಂಡಳಿಯ ಖಾತೆಯಿಂದ ವಿವಿಧ ಉದ್ದೇಶಗಳಿಗಾಗಿ ರೂ. 1,18,091/– (ಒಂದು ಲಕ್ಷದ ಹದಿನೆಂಟು ಸಾವಿರದ ತೊಂಬತ್ತೊಂದು ರೂಪಾಯಿಗಳು ಮಾತ್ರ) ಗಳ ಮುಂಗಡ ಹಾಗೂ ವಿದ್ಯಾರ್ಥಿ ನಿಲಯದ ಉಳಿತಾಯ ಖಾತೆಯಿಂದ ಪಡೆಯಲಾದ ಮುಂಗಡ ಹಣ ರೂ. 39,110/–(ಮೂವತ್ತೊಂಬತ್ತು ಸಾವಿರದ ಒಂದುನೂರ ಹತ್ತು ರೂಪಾಯಿಗಳು ಮಾತ್ರ)ಗಳನ್ನು ಮರಳಿ ಸಂಬಂಧಿಸಿದ ಖಾತೆಗೆ ಭರಿಸಿದ ಕುರಿತು ಯಾವುದೇ ದಾಖಲಾತಿಗಳನ್ನು ಹಾಜರು ಪಡಿಸದ ಆರೋಪಗಳಿಗಾಗಿ ಅವರಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ:23–09–2010ರ ನೋಟೀಸ್ ನೀಡಿ ಸಮಜಾಯಿಷಿ ಕೇಳಲಾಯಿತು. ಆರೋಪಿಯು ಮೇಲೆ (2) ರಲ್ಲಿ ಓದಲಾದ ದಿನಾಂಕ: 25–11–2010ರಲ್ಲಿ ಉತ್ತರ ನೀಡಿ ಆರೋಪಗಳನ್ನು ನಿರಾಕರಿಸಿದ್ದಾರೆ. ಅಧಿಕಾರಿಯು ಸಲ್ಲಿಸಿರುವ ವಿವರಣೆ ತೃಪ್ತಿಕರವಾಗಿಲ್ಲದಿರುವ ಕಾರಣ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರೆಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಯುಸೇಇ 04 ಯುಇಸೇ 10 ಬೆಂಗಳೂರು, ದಿನಾಂಕ: 11–04–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಹೆಚ್. ಬಸವರಾಜ ಹಡಪದ, ಸಹಾಯಕ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸುವ ಸಲುವಾಗಿ ಶ್ರೀ ಎಂ.ಜಿ. ಹಿರೇಮಠ್, ನಿವೃತ್ತ ನ್ಯಾಯಾಧೀಶರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲು ಸರ್ಕಾರವು ಆದೇಶಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಶ್ರೀ ಸತೀಶ್ ಎಸ್. ಸಜ್ಜನರ್, ಸಹಾಯಕ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಬೆಂಗಳೂರು, ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ಸಹ ಆದೇಶಿಸಲಾಗಿದೆ.

ಈ ವಿಚಾರಣೆಗಾಗಿ ಶ್ರೀ ಎಂ. ಜಿ. ಹಿರೇಮಠ್ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇಇವಿ 2007, ದಿನಾಂಕ: 11–04–2008ರಲ್ಲಿ ನಿಗದಿಪಡಿಸಿರುವ ರೂ. 8,000/– (ಎಂಟು ಸಾವಿರ ರೂಪಾಯಿಗಳು) ಗೌರವಧನವನ್ನು ಹಾಗೂ ರೂ. 1,500/– (ಒಂದು ಸಾವಿರದ ಐದುನೂರು ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಪಡೆಯುತ್ತಾರೆ.

ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರ ಸೇವೆ, ಲೇಖನ ಸಾಮಗ್ರಿ, ಇತ್ಯಾದಿಗಳನ್ನು ಒದಗಿಸಲು ನಿರ್ದೇಶಕರು, ಯುವಜನ ಸೇವಾ ಕ್ರೀಡಾ ಇಲಾಖೆ ರವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣಾಧಿಕಾರಿಯವರು ಈ ವಿಚಾರಣೆಯನ್ನು ಆರು ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ. ಶ್ರೀನಿವಾಸ್**

ಪಿ.ಆರ್ 1138

ಸರ್ಕಾರದ ಅಧೀನ ಕಾರ್ಯದರ್ಶಿ

ಯುವಜನ ಸೇವಾ ಇಲಾಖೆ.

## ENERGY SECRETARIAT

**Sub :-** Transfer of 4.00 MW wind power capacity in favour of M/s. Cape Infrastructure Pvt. Ltd. - reg.

**Read:-**
1. Government Order No: EN 204 NCE 2008 dated: 12.06.2009.
2. Letter No. KRED/08/CIL-4 MW (SBO&B) 2011/783 dated: 03/14.03.2011 received from the Managing Director, Karnataka Renewable Energy Development Limited, Bangalore.

**Preamble:**

In the Government order read at (1) above, sanction has been accorded for allottment of 10.00 MW capacity Wind Power Project at Gadag District to M/s S.B. Odunavar & Brothers consisting of two areas with 5.00 MW each and idendified as 'A' & 'B'. Out of 5.00 MW capacity at area 'B' (Naregal & Kotumachigi villages in Gadag District) 1.00 MW capacity has already been transferred to M/s. Nectar Beverages (P) Ltd.

Now, the Managing Director, Karnataka enewable Energy Development Limited, Bangalore in his letter read at (2) above has recommended to the Government for transfer of the balance 4.00 MW Wind Power capacity in favour of M/s Cape Infrastructure Pvt. Ltd. in Naregal village, Ron Taluk, Gadag District from M/s S.B. Odunavar & Brothers.

The proposal has been examined in detail and hence the following Order:-

**GOVERNMENT ORDER NO: EN 165 NCE 2011 BANGALORE, DATED: 07.04.2011.**

Government accords approval for transfer of 4.00 MW wind power capacity in favour of M/s Cape Infrastructure Pvt. Ltd from out of the sanctioned capacity of 5.00 MW (part capacity of 10.00 MW area 'B') of M/s S.B Odunavar & Brothers at Naregal village, Ron Taluk, Gadag District as detailed below:

A Plain area is proposed for the project. Which is situated between Naregal and Kotumachigi. The Average elevation of the proposed area is 640m Amsl. Further, it has presence of power lines and state highways and there are not significant peaks in it. And is held in the following Geographical Co-ordinates: Latitude: 15° 30' 40''- 15°34 '12'' N Longitude: 75° 46' 15'' - 75° 51' 31'' E Ridge peaks: 646, 651, 645m Amsl

→

| Village Name | Taluk & District | Survey Number | Extent of Land | WTG location No. | |
|---|---|---|---|---|---|
| Naregal | Ron/Gadag | 144/23, 145/15, 151/02 & 151/15 | 3 Acres per WTG of capacity 1 MW | N-2<br>N-4 | N-3<br>N-5 |

1. M/s Cape Infrastructure Pvt. Ltd shall execute an agreement with Government within 45 (forty five) days from the date of issue of this Order.
2. Karnataka Power Transmission Corporation Limited to accord power evacuation and grid synchronization approvals.
3 **PPA / Wheeling & Banking** is assigned to HESCOM. HESCOM shall execute the PPA / Wheeling & Banking with M/s Cape Infrastructure Pvt, Ltd.
4 The Government reserves the right to Cancel/modify this Order.

The other terms and conditions of the Government Order read at (1) above shall **IPSO FACTO** applicable.

BY ORDER AND IN THE NAME OF THE GOVERNOR OF KARNATAKA

**Suresh. B. Krishnappanavar**
Under Secretary to Government,
Energy Department

P.R. 1139

## ENERGY SECRETARIAT

**Sub :-** Transfer of Project from M/s Corporate Hydro Energy Private Limited to M/s MVK Green Power Private Limited-reg.

**Read:-**
1. Government Order No: EN 382 NCE 2007 dated: 01-6-2009
2. Letter No. KRED/06/SH-315/Castlerock MHS/938 dated: 19/22.3.2011 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, sanction has been accorded for allottment of 4.00 MW Castelrock MHS across Doodh Sagar Stream near Castelrock village, Joida Taluk, Uttara Kannada District in favour of M/s Corporate Hydro Energy Private Limited.

In the letter read at (2) above, as per the request of the developer the Managing Director, Karnataka Renewable Energy Development Limited, Bangalore has sent a proposal to Government for transfer of project from M/s Corporate Hydro Energy Private Limited to M/s MVK Green Power Private Limited.

The Assistant Registrar of Companies, Andra Pradesh has issued a certificate of incorporation for M/s MVK Green Power Private Limited vide CIN No: U40108AP2010PTC071618 dated: 11.12.2010.

The proposal has been examined in detail and hence the following Order:-

**GOVERNMENT ORDER NO: EN 181 NCE 2011, BANGALORE, DATED: 06.04.2011**

Government accords approval for the transfer of project from M/s Corporate Hydro Energy Private Limited to M/s MVK Green Power Private Limited to implement 4 MW capacity Castelrock MHS across Doodh Sagar Stream near Castelrock village, Joida Taluk, Uttara Kannada District.

The Government has reserved the power to Cancel/modify this Order.

The other terms and conditions of the Government Order read at (1) shall **IPSO FACTO** applicable.

By Order and in the name of the Governor of Karnataka

**Suresh. B. Krishnappanavar**

Under Secretary to Government,

Energy Department.

P.R. 1140

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಮಾವನೂರ ಗ್ರಾಮದ ಹತ್ತಿರ ಮಾರ್ಕಂಡೇಯ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ :**
1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–1/2011–12/2107, ದಿನಾಂಕ: 18/04/2011.
2. ಸರ್ಕಾರದ ಆದೇಶ ಸಂಖ್ಯೆ: ಸನೀಇ 236 ಮಸಾವಿ 2009(19) ದಿನಾಂಕ: 09/07/2010.

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಮಾವನೂರ ಗ್ರಾಮದ ಹತ್ತಿರ ಮಾರ್ಕಂಡೇಯ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ವಿಜಯ ಕರ್ನಾಟಕ ದಿನಪತ್ರಿಕೆ | 13/11/2010 |
| ಕನ್ನಡ ಪ್ರಭ ದಿನಪತ್ರಿಕೆ | 13/11/2010 |
| ಡೆಕ್ಕನ್ ಹೆರಾಲ್ಡ್ ಆಂಗ್ಲ ದಿನಪತ್ರಿಕೆ | 13/11/2010 |
| ಜಿಲ್ಲಾ ಟೆಂಡರ್ ಬುಲೆಟಿನ್ | 08/11/2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ: 31/03/2011ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 98,82,636/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,15,52,694/- |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ ಹಾಗೂ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಎ.ಎಸ್.ಸವಸುದ್ಧಿ ಪ್ರಥಮ ದರ್ಜೆ ಗುತ್ತಿಗೆದಾರರು | 1,38,35,647/– | 40.00 ಹೆಚ್ಚು | 19.76 ಹೆಚ್ಚು |

ಮೇಲ್ಕಂಡಂತೆ ಶ್ರೀ ಎ.ಎಸ್. ಸವಸುದ್ಧಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 19.76ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಗುತ್ತಿಗೆದಾರರು ದಿನಾಂಕ: 26/04/2011ರಂದು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 10.00ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ

ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,15,52,694/–ಗಳ ಮೇಲೆ ಶೇ. 7.50ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,24,19,146/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 30 ಅಪಿಬಂ 2011 (ತಾಂತ್ರಿಕ) ಬೆಂಗಳೂರು, ದಿನಾಂಕ: 10ನೇ ಮೇ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಮಾವನೂರ ಗ್ರಾಮದ ಹತ್ತಿರ ಮಾರ್ಕಂಡೇಯ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,15,52,694/–ಗಳ ಮೇಲೆ ಶೇ. 7.50ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,24,19,146/– ಗಳಿಗೆ (ರೂ. ಒಂದು ಕೋಟಿ ಇಪ್ಪತ್ತನಾಲ್ಕು ಲಕ್ಷ ಹತ್ತೊಂಭತ್ತು ಸಾವಿರದ ಒಂದು ನೂರ ನಲವತ್ತಾರು) ಶ್ರೀ ಎ.ಎಸ್. ಸವಸುದ್ಧಿ, ಒಂದನೇ ದರ್ಜೆ ಗುತ್ತಿಗೆದಾರರುರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ರುದ್ರಮೂರ್ತಿ
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್: 1310

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಅಥರ್ಗಾ ಗ್ರಾಮದ ಕಮಲಾಬಾಯಿ ಹಾಗೂ ಇತರರ ಸರ್ವೆ ನಂ. 846/2, 850, 851, 878/1,2,3 ಹಾಗೂ 896 ಜಮೀನುಗಳಿಗೆ ಸಾಮೂಹಿಕ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಪಿಬಿ–9/ಅಥರ್ಗಾಸ.ನ.846/2.ಇತ್ಯಾದಿ/2010–11/2091, ದಿನಾಂಕ: 13/04/2011

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಅಥರ್ಗಾ ಗ್ರಾಮದ ಕಮಲಾಬಾಯಿ ಹಾಗೂ ಇತರರ ಸರ್ವೆ ನಂ. 846/2, 850, 851, 878/1,2,3 ಹಾಗೂ 896 ಜಮೀನುಗಳಿಗೆ ಸಾಮೂಹಿಕ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯ ಅಂದಾಜಿಗೆ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ ಬೆಳಗಾವಿರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 29/01/2011 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 28/01/2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಮೂವರು ಗುತ್ತಿಗೆದಾರರು ಭಾಗವಹಿಸಿರುತ್ತಾರೆ. ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 29,75,669/– |
|---|---|---|---|---|
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 32,02,023/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ ಹಾಗೂ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಆರ್.ಬಿ. ಹೊಸಮನಿ ಒಂದನೇ ದರ್ಜೆ ಗುತ್ತಿಗೆದಾರರು | 36,31,533/– | 22.041 ಹೆಚ್ಚು | 13.41 ಹೆಚ್ಚು |

ಮೇಲ್ಕಂಡಂತೆ ಶ್ರೀ ಆರ್.ಬಿ. ಹೊಸಮನಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 13.41 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ: 20/04/2011 ರಂದು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ.10.00ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 32,02,023/–ಗಳ ಮೇಲೆ ಶೇ. 8.50ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 34,74,195/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 17 ಏನೀಯೋ 2011 (ತಾಂತ್ರಿಕ) ಬೆಂಗಳೂರು, ದಿನಾಂಕ: 10/05/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಅಥರ್ಗಾ ಗ್ರಾಮದ ಕಮಲಾಬಾಯಿ ಹಾಗೂ ಇತರರ ಸರ್ವೆ ನಂ. 846/2, 850, 851,878/1,2,3 ಹಾಗೂ 896 ಜಮೀನುಗಳಿಗೆ ಸಾಮೂಹಿಕ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 32,02,023/– ಗಳ ಮೇಲೆ ಶೇ. 8.50ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 34,74,195/–ಗಳಿಗೆ (ರೂ. ಮೂವತ್ನಾಲ್ಕು ಲಕ್ಷ ಎಪ್ಪತ್ತನಾಲ್ಕು ಸಾವಿರದ ಒಂದು ನೂರ ತೊಂಭತ್ತೈದು) ಶ್ರೀ ಆರ್.ಬಿ.ಹೊಸಮನಿ, ಒಂದನೇ ದರ್ಜೆ ಗುತ್ತಿಗೆದಾರರುರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ರುದ್ರಮೂರ್ತಿ
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಪಿ.ಆರ್. 1311 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆ ಭಾಲ್ಕಿ ತಾಲ್ಲೂಕಿನ ಚಿಟ್ಟಾ ಗ್ರಾಮದ ಸರ್ವೆ ನಂ.107 ಮತ್ತು 93ರಲ್ಲಿರುವ ಶ್ರೀ ಅಂಕುಶ ತಂದೆ ನಾಗಪ್ಪ ಮತ್ತೆ ಇತರರ ಕೃಷಿಕಾಯ ಭೂಮಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ/(ಉ)ವಲಯ/ಬಿಜೆಪಿ/ಎಇ–6/2010–11/1976, ದಿನಾಂಕ: 06/04/2011.

**ಪ್ರಸ್ತಾವನೆ** :

ಬೀದರ್ ಜಿಲ್ಲೆ ಭಾಲ್ಕಿ ತಾಲ್ಲೂಕಿನ ಚಿಟ್ಟಾ ಗ್ರಾಮದ ಸರ್ವೆ ನಂ. 107 ಮತ್ತು 93 ರಲ್ಲಿರುವ ಶ್ರೀ ಅಂಕುಶ ತಂದೆ ನಾಗಪ್ಪ ಮತ್ತೆ ಇತರರ ಕೃಷಿಕಾಯ ಭೂಮಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯ ಅಂದಾಜಿಗೆ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ ಗುಲ್ಬರ್ಗಾರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೀದರ್ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 13/01/2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 10,42,912/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 10,79,010/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ ಹಾಗೂ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಶಿವರಾಜ ರಮಣ ಘುಲೇಖರ, ಒಂದನೇ ದರ್ಜೆ ಗುತ್ತಿಗೆದಾರರು | 11,54,348/– | 10.685 ಹೆಚ್ಚು | 6.98 ಹೆಚ್ಚು |

ಮೇಲ್ಕಂಡಂತೆ ಶ್ರೀ ಶಿವರಾಜ ರಮಣ ಘುಲೇಖರ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 6.98ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರ್‌ನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 10,79,010/–ಗಳ ಮೇಲೆ ಶೇ. 6.95ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 11,54,001/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 14 ಏನೀಯೋ 2011 (ತಾಂತ್ರಿಕ) ಬೆಂಗಳೂರು, ದಿನಾಂಕ: 10/05/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೀದರ್ ಜಿಲ್ಲೆ ಭಾಲ್ಕಿ ತಾಲ್ಲೂಕಿನ ಚಿಟ್ಟಾ ಗ್ರಾಮದ ಸರ್ವೆ ನಂ. 107 ಮತ್ತು 93 ರಲ್ಲಿರುವ ಶ್ರೀ ಅಂಕುಶ ತಂದೆ ನಾಗಪ್ಪ ಮತ್ತೆ ಇತರರ ಕೃಷಿಕಾಯ ಭೂಮಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 10,79,010/–ಗಳ ಮೇಲೆ ಶೇ. 6.95ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 11,54,001/–ಗಳಿಗೆ (ರೂ. ಹನ್ನೊಂದು ಲಕ್ಷ ಐವತ್ತನಾಲ್ಕು ಸಾವಿರದ ಒಂದು) ಶ್ರೀ ಶಿವರಾಜ ರಮಣ ಘುಲೇಖರ, ಒಂದನೇ ದರ್ಜೆ ಗುತ್ತಿಗೆದಾರರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1312 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಉದ್ಯಾವರ ಗ್ರಾಮದ ಬೋಲ್ಜಾ ಎಂಬಲ್ಲಿ ಉಪ್ಪು ನೀರು ತಡೆ ಕಿಂಡಿ ಅಣೆಕಟ್ಟು ಅಭಿವೃದ್ಧಿ ಕಾಮಗಾರಿಯ ಟೆಂಡರ್ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ:ಸನೀಇ 10 ನಯೋಕಾ 2010 ದಿನಾಂಕ: 27/11/2010.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂಸ–5/ಸ.ಇಂ.11/ಉ.ಜಿ/ಉ.ತಾ/ಬೋಲ್ಜಾಉ.ನೀ.ಕಿಂ.ಅ/ಅಭಿವೃದ್ಧಿ/ ಟೆಂಡರ್ ಅನುಮೋದನೆ/2011/1777, ದಿನಾಂಕ: 13/04/2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ನಬಾರ್ಡ್ ಆರ್.ಐ.ಡಿ.ಎಫ್–16ರಲ್ಲಿ ರೂ.9458.76 ಲಕ್ಷ ಅಂದಾಜು ಮೊತ್ತದ 169 ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಈ ಪೈಕಿ ರೂ. 17.50 ಲಕ್ಷ ಮೊತ್ತದ ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಉದ್ಯಾವರ ಗ್ರಾಮದ ಬೋಲ್ಜಾ ಎಂಬಲ್ಲಿ ಉಪ್ಪು ನೀರು ತಡೆ ಕಿಂಡಿ ಅಣೆಕಟ್ಟು ಅಭಿವೃದ್ಧಿ ಕಾಮಗಾರಿಯು ಸೇರಿದ್ದು, ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ ಮೈಸೂರುರವರ ನೋಂದಣಿ ಸಂಖ್ಯೆ: 77/2010–11ರಲ್ಲಿ 4702–ಅಣೆಕಟ್ಟು ಮತ್ತು ಪಿಕಪ್–ನಬಾರ್ಡ್ ಅಡಿ ಅಂದಾಜಿಗೆ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಉಡುಪಿ ಜಿಲ್ಲಾ ಟೆಂಡರ್ ಬುಲೆಟಿನ್ | 28/02/2011 |
| ಕನ್ನಡಪ್ರಭ ಹಾಗೂ ವಾರ್ತಾ ಭಾರತಿ ದಿನ ಪ್ರತಿಕೆ | 06/03/2011 |

ಟೆಂಡರ್‌ಗಳನ್ನು ದಿನಾಂಕ: 18/03/2011ರಂದು ತೆರೆದು ಪರಿಶೀಲಿಸಲಾಗಿ, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬ ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರ ಟೆಂಡರ್ ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 17,40,949/– |
| ಸಿಮೆಂಟ್ ಮತ್ತು ಉಕ್ಕಿನ ಪ್ರಸಕ್ತ ಮಾರುಕಟ್ಟೆ ದರಗಳನ್ನು ಪರಿಗಣಿಸಿದಂತೆ ಪರಿಷ್ಕೃತ ಟೆಂಡರಿಗೆ ಇಡಲಾದ ಮೊತ್ತ | ರೂ. 17,54,843/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕೃತ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಎ. ಬಾಲಕೃಷ್ಣಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು, ಉಡುಪಿ. | 19,56,740/– | 12.39 ಹೆಚ್ಚು | 11.50 ಹೆಚ್ಚು |

ಮೇಲ್ಕಂಡಂತೆ ಶ್ರೀ ಎ. ಬಾಲಕೃಷ್ಣಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 11.50ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಅನುಮೋದಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರ ದಿನಾಂಕ: 27/04/2011ರ ಪತ್ರದಲ್ಲಿ ಇತ್ತೀಚೆಗೆ ಗಣಿಗಾರಿಕೆ ನೀತಿಯಿಂದ ಜಲ್ಲಿ, ಮರಳು ದರಗಳಲ್ಲಿ ವಿಪರೀತ ಹೆಚ್ಚಳವಾಗಿರುತ್ತದೆ. ಅದಲ್ಲದೆ ಸಿಮೆಂಟ್ ಮತ್ತು ಸ್ಟೀಲ್ ದರಗಳಲ್ಲಿ ಗಣನೀಯ ಪ್ರಮಾಣದಲ್ಲಿ ಏರಿಕೆಯಾಗಿರುವುದಾಗಿ ತಿಳಿಸಿ ಈ ಕಾರಣಗಳಿಂದ ಶೇಕಡ 10.00 ರಷ್ಟು ಹೆಚ್ಚಿನ ದರಗಳಲ್ಲಿ ನಿರ್ವಹಿಸಲು ಒಪ್ಪಿಗೆ ಪತ್ರ ನೀಡಿ
ಈ ದರಗಳಿಗೆ ಟೆಂಡರ್ ಅನುಮೋದಿಸಲು ಕೋರಿರುತ್ತಾರೆ. ಗುತ್ತಿಗೆದಾರರು ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಕಾಮಗಾರಿಯ ಟೆಂಡರ್‌ನ್ನು ಪರಿಷ್ಕೃತ ದರಗಳ ಮೇಲೆ ಶೇ.7.5ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.18,86,456/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 27 ಅಪಿಬಂ (ತಾಂತ್ರಿಕ) 2011 ಬೆಂಗಳೂರು, ದಿನಾಂಕ: 10/05/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಉದ್ಯಾವರ ಗ್ರಾಮದ ಬೋಲ್ಜಾ ಎಂಬಲ್ಲಿ ಉಪ್ಪು ನೀರು ತಡೆ ಕಿಂಡಿ ಅಣೆಕಟ್ಟು ಅಭಿವೃದ್ಧಿ ಕಾಮಗಾರಿಯ ಟೆಂಡರ್ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 17,54,843/–ಗಳ ಮೇಲೆ ಶೇ.7.5ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 18,86,456/–ಗಳಿಗೆ (ರೂ ಹದಿನೆಂಟು ಲಕ್ಷ ಎಂಬತ್ತಾರು ಸಾವಿರದ ನಾಲ್ಕುನೂರ ಐವತ್ತಾರು) ಕಾಮಗಾರಿಯನ್ನು ಶ್ರೀ ಎ. ಬಾಲಕೃಷ್ಣಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1313 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಮೈಸೂರು ಜಿಲ್ಲೆ, ಹುಣಸೂರು ತಾಲ್ಲೂಕು, ಬಿಳಿಕೆರೆ ಹೋಬಳಿ ತುರುಕನಕಟ್ಟೆ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :**
1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಮುಸದ/ಲೆಶಾಖೆ/ಲೆಸ–1/ಭೂಸ್ವಾಧೀನ/10–11/356, ದಿನಾಂಕ: 21/02/2011.
2. ಕಂದಾಯ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಕಂಇ 08 ಭೂಸ್ವಾಮ್ಯ 2011, ದಿನಾಂಕ: 25/02/2011.

**ಪ್ರಸ್ತಾವನೆ :**

ಮೈಸೂರು ಜಿಲ್ಲೆ, ಹುಣಸೂರು ತಾಲ ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ ಕ್ರಮಾಂಕ (1)ರಲ್ಲಿ ಓದ ಲ್ಲೂಕು ಬಿಳಿಕೆರೆ ಹೋಬಳಿ ತುರುಕನಕಟ್ಟೆ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ದೈತ್ಯನಕೆರೆ ಕಾವಲ್ ಗ್ರಾಮದ ಸ.ನಂ. 1/17–20ರ ಒಟ್ಟು 7–19 ಎಕರೆ ಜಮೀನಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ಆದೇಶದಂತೆ ಪರಿಹಾರ ಪಾವತಿಸಲು ರೂ. 13,10,048–00ಗಳ ಲಾದ ಪತ್ರದಲ್ಲಿ ಕೋರಿರುತ್ತಾರೆ.

ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆಯನ್ನು ದಿನಾಂಕ: 21/12/95ರಂದು ಹೊರಡಿಸಿದೆ. ಸ್ವಾಧೀನಕ್ಕೊಳಪಟ್ಟ ಜಮೀನುಗಳಿಗೆ ಉಪ ವಿಭಾಗಾಧಿಕಾರಿ, ಹುಣಸೂರು ಉಪ ವಿಭಾಗ, ಹುಣಸೂರು ಇವರು ದಿನಾಂಕ: 28/07/93ರಂದು ರಚಿಸಿರುವ ಐತೀರ್ಪಿನಲ್ಲಿ ಪ್ರತಿ ಎಕರೆ ಜಮೀನಿಗೆ ರೂ. 50,000/– ಮಾರುಕಟ್ಟೆ ಬೆಲೆ ನಿಗದಿಪಡಿಸಿರುತ್ತಾರೆ. ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ಹುಣಸೂರು ಇಲ್ಲಿ ಸಲ್ಲಿಸಿದ್ದ ಎಲ್.ಎ.ಸಿ. ಸಂಖ್ಯೆ 435/98ನ್ನು ದಿನಾಂಕ: 18/10/06ರಂದು ವಜಾಮಾಡಿದೆ. ಈ ಆದೇಶದ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ಎಂಎಫ್‌ಎ ಸಂಖ್ಯೆ:1856/07ರಲ್ಲಿ ನ್ಯಾಯಾಲಯವು ದಿನಾಂಕ: 30/10/09ರಂದು ನೀಡಿರುವ ಆದೇಶದಲ್ಲಿ ಪ್ರತಿ ಎಕರೆ ತರಿ ಜಮೀನಿಗೆ ರೂ. 1.00ಲಕ್ಷ ಮತ್ತು ಖುಷ್ಕಿ ಜಮೀನಿಗೆ ರೂ. 75,000/– ಮಾರುಕಟ್ಟೆ ಬೆಲೆಯನ್ನು ನಿಗದಿಪಡಿಸಿದೆ.

ಪ್ರಸ್ತುತ ಈ ಕೆರೆ ಕಾವೇರಿ ನೀರಾವರಿ ನಿಗಮದ ಉಸ್ತುವಾರಿಯಲ್ಲಿದ್ದು, ನ್ಯಾಯಾಲಯದ ಆದೇಶದಂತೆ ಹಣ ಬಿಡುಗಡೆಯಾಗದ ಕಾರಣ ಕಂದಾಯ ಇಲಾಖೆಯ ಅಧಿಕಾರಿಗಳ ಕಛೇರಿಗಳನ್ನು ಜಪ್ತಿಗೆ ವಾರೆಂಟ್ ಹೊರಡಿಸುವ ಪರಿಸ್ಥಿತಿ ಉಂಟಾಗಿರುವುದರಿಂದ, ನ್ಯಾಯಾಲಯದ ಆದೇಶದಂತೆ ರೂ.13,10,048/–ಗಳನ್ನು ಜರೂರಾಗಿ ಬಿಡುಗಡೆ ಮಾಡುವಂತೆ ಮೇಲೆ ಕ್ರಮಾಂಕ(2)ರಲ್ಲಿ ಓದಲಾದ ದಿನಾಂಕ: 25/02/11ರ ಅನಧಿಕೃತ ಟಿಪ್ಪಣಿಯಲ್ಲಿ ಕೋರಲಾಗಿದೆ.

ಮುಖ್ಯ ಇಂಜಿನಿಯರ್ ಮತ್ತು ಕಂದಾಯ ಇಲಾಖೆಯ ಕೋರಿಕೆಗಳನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 16 ಭೂಸ್ವಾಪ್ರ 2011 ಬೆಂಗಳೂರು, ದಿನಾಂಕ 12/05/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಜಿಲ್ಲೆ, ಹುಣಸೂರು ತಾಲ್ಲೂಕು, ಬಿಳಿಕೆರೆ ಹೋಬಳಿ ತುರುಕನಕಟ್ಟೆ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ದೈತ್ಯನಕೆರೆ ಕಾವಲ್ ಗ್ರಾಮದ ಸ.ನಂ.1/17–20ರ ಒಟ್ಟು 7–19 ಎಕರೆ ಜಮೀನಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಮೊತ್ತ ರೂ.13,10,048–00ಗಳನ್ನು (ಹದಿಮೂರು ಲಕ್ಷದ ಹತ್ತು ಸಾವಿರದ ನಲವತ್ತೆಂಟು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–132– ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 13,10,048–00ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20/10/2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಗೋಪಾಲ್**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1314

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** 2010–11ನೇ ಸಾಲಿನ ಲೆಕ್ಕಶೀರ್ಷಿಕೆ 4702–00–800–1–00–132–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳ ಇತ್ಯರ್ಥ ಬಂಡವಾಳ ವೆಚ್ಚಗಳು (ಯೋಜನೆ) ರಡಿ ಬಿಡುಗಡೆ ಮಾಡಿದ ಅನುದಾನದಲ್ಲಿ ಖಜಾನೆ ಗಣಕ ಜಾಲ ಅಗದೇ ಇರುವ ಆದೇಶಗಳನ್ನು ಹಿಂಪಡೆಯುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 37 ಆವಿಸಂ 2010, ದಿನಾಂಕ: 28/03/2011 ಮತ್ತು 31/03/2011.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ/(ಉ)ವ/ಬಿಜಾ/ಭೂಸ್ವಾಪ್ರ/2011–12/2147, ದಿನಾಂಕ: 19/04/2011.
3. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ಲೆಶಾಖೆ/ಲೆಸ–1/ಭೂಸ್ವಾಧೀನ ಅನುದಾನ/10–11/1839, ದಿನಾಂಕ: 21/04/2011.

**ಪ್ರಸ್ತಾವನೆ:**

2010–11ನೇ ಸಾಲಿನ ಲೆಕ್ಕಶೀರ್ಷಿಕೆ 4702–00–800–1–00–132–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳ ಇತ್ಯರ್ಥ ಬಂಡವಾಳ ವೆಚ್ಚಗಳು (ಯೋಜನೆ) ರಡಿಯಲ್ಲಿ ಒದಗಿಸಲಾಗಿದ್ದ ಅನುದಾನದಲ್ಲಿ ಎರಡೂ ವಲಯಗಳಿಗೆ ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಈ ಮುಂದಿನಂತೆ ಹಂಚಿಕೆ ಮಾಡಲಾಗಿತ್ತು.

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಸರ್ಕಾರದ ಆದೇಶ ಸಂಖ್ಯೆ ಮತ್ತು ದಿನಾಂಕ | ಹಂಚಿಕೆ ಮಾಡಿರುವ ಮೊತ್ತ | | ಒಟ್ಟು |
|---|---|---|---|---|---|
| | | | ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ | ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ | |
| 1 | 4702–00–800–1–00–132–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳ ಇತ್ಯರ್ಥ ಬಂಡವಾಳ ವೆಚ್ಚಗಳು (ಯೋಜನೆ) | ಸನೀಇ 37 ಆವಿಸಂ 2010, ದಿನಾಂಕ: 28/03/2011 | 3999293.00 | 62377500.00 | 66376793.00 |
| 2 | 4702–00–800–1–00–132–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳ ಇತ್ಯರ್ಥ ಬಂಡವಾಳ ವೆಚ್ಚಗಳು (ಯೋಜನೆ) | ಸನೀಇ 37 ಆವಿಸಂ 2010, ದಿನಾಂಕ: 31/03/2011 | 4334488.00 | 38688719.00 | 43023207.00 |

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ)ವಲಯ, ಬಿಜಾಪುರ ಮತ್ತು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರುಗಳ ಮೇಲೆ ಕ್ರಮಾಂಕ: (3) ಮತ್ತು (4)ರಲ್ಲಿ ಓದಲಾದ ಪತ್ರಗಳಲ್ಲಿ ಮೇಲಿನಂತೆ ಹಂಚಿಕೆ ಮಾಡಿದ್ದ ಅನುದಾನದಲ್ಲಿ ಕೆಲವೊಂದು ಆದೇಶಗಳಿಗೆ ಖಜಾನೆ ಗಣಕ ಜಾಲ ಆಗದೇ ಇರುವುದರಿಂದ ಅನುದಾನವನ್ನು ಪಡೆಯಲು ಸಾಧ್ಯವಾಗದ ಕಾರಣ ಅಂತಹ ಆದೇಶಗಳನ್ನು ಹಿಂಪಡೆಯಲು ಕೋರಿರುತ್ತಾರೆ. ವಿವರಗಳನ್ನು ಈ ಆದೇಶಕ್ಕೆ ಲತ್ತಿಸಿರುವ ಅನುಬಂಧದಲ್ಲಿ ತೋರಿಸಲಾಗಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 50 ಭೂಸ್ವಾಪ್ರ 2011 ಬೆಂಗಳೂರು, ದಿನಾಂಕ 12/05/2011**

2010-11ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 4702-00-800-1-00-132-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳ ಇತ್ಯರ್ಥ ಬಂಡವಾಳ ವೆಚ್ಚಗಳು (ಯೋಜನೆ) ರಡಿ ಬಿಡುಗಡೆ ಮಾಡಿದ ಅನುದಾನದಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವ ಆದೇಶಗಳಿಗೆ ಖಜಾನೆ ಗಣಕ ಜಾಲ ಆಗದೇ ಇರುವುದರಿಂದ ಅವುಗಳನ್ನು ಈ ಮೂಲಕ ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಸರ್ಕಾರದ ಆದೇಶ ಸಂಖ್ಯೆ: ಸನೀಇ 50 ಭೂಸ್ವಾಪ್ರ 2011 ಬೆಂಗಳೂರು, ದಿನಾಂಕ 12/05/2011ಕ್ಕೆ ಅನುಬಂಧ

**ಸಣ್ಣ ನೀರಾವರಿ ಉತ್ತರ ವಲಯ:**

| ಕ್ರ.ಸಂ. | ಆದೇಶ ಸಂ | ದಿನಾಂಕ | ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|---|
| 1. | ಸನೀಇ 123 ಭೂಸ್ವಾಪ್ರ 2010 | 23/03/2011 | 75,30,551.00 |
| 2. | ಸನೀಇ 155 ಭೂಸ್ವಾಪ್ರ 2010 | 24/03/2011 | 5,30,651.00 |
| 3. | ಸನೀಇ 43 ಭೂಸ್ವಾಪ್ರ 2010 | 24/03/2011 | 19,16,384.00 |
| 4. | ಸನೀಇ 103 ಭೂಸ್ವಾಪ್ರ 2010 | 24/03/2011 | 13,96,866.00 |
| 5. | ಸನೀಇ 160 ಭೂಸ್ವಾಪ್ರ 2010 | 24/03/2011 | 3,48,603.00 |
| 6. | ಸನೀಇ 33 ಭೂಸ್ವಾಪ್ರ 2011 | 24/03/2011 | 24,88,830.00 |
| 7. | ಸನೀಇ 145 ಭೂಸ್ವಾಪ್ರ 2010 | 24/03/2011 | 3,67,567.00 |
| 8. | ಸನೀಇ 111 ಭೂಸ್ವಾಪ್ರ 2010 | 24/03/2011 | 12,95,181.00 |
| 9. | ಸನೀಇ 108 ಭೂಸ್ವಾಪ್ರ 2010 | 24/03/2011 | 21,77,036.00 |
| 10. | ಸನೀಇ 135 ಭೂಸ್ವಾಪ್ರ 2010 | 25/03/2011 | 4,90,986.00 |
| 11. | ಸನೀಇ 35 ಭೂಸ್ವಾಪ್ರ 2011 | 25/03/2011 | 10,25,285.00 |
| 12. | ಸನೀಇ 110 ಭೂಸ್ವಾಪ್ರ 2010 | 25/03/2011 | 9,65,400.00 |
| 13. | ಸನೀಇ 112 ಭೂಸ್ವಾಪ್ರ 2010 | 25/03/2011 | 1,49,864.00 |
| 14. | ಸನೀಇ 149 ಭೂಸ್ವಾಪ್ರ 2009 | 25/03/2011 | 1,31,963.00 |
| 15. | ಸನೀಇ 138 ಭೂಸ್ವಾಪ್ರ 2010 | 25/03/2011 | 9,05,679.00 |
| 16. | ಸನೀಇ 124 ಭೂಸ್ವಾಪ್ರ 2010 | 26/03/2011 | 3,41,040.00 |
| 17. | ಸನೀಇ 19 ಭೂಸ್ವಾಪ್ರ 2011 | 30/03/2011 | 1,49,384.00 |

**ಸಣ್ಣ ನೀರಾವರಿ ದಕ್ಷಿಣ ವಲಯ:**

| | | | |
|---|---|---|---|
| 18. | ಸನೀಇ 97 ಭೂಸ್ವಾಪ್ರ 2010 | 23/03/2011 | 8,10,266.00 |
| 19. | ಸನೀಇ 122 ಭೂಸ್ವಾಪ್ರ 2010 | 24/03/2011 | 1,25,296.00 |
| 20. | ಸನೀಇ 16 ಭೂಸ್ವಾಪ್ರ 2011 | 29/03/2011 | 13,10,048.00 |
| 21. | ಸನೀಇ 149 ಭೂಸ್ವಾಪ್ರ 2010 | 30/03/2011 | 14,51,360.00 |

ಗೋಪಾಲ್

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1315

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಹಾವನೂರ ಜಿಲ್ಲೆ ಹಾಗೂ ತಾಲ್ಲೂಕಿನ ಹಾವನೂರ ಏತ ನೀರಾವರಿ ಯೋಜನೆಗೆ ಪ್ರಸ್ತಾಪಿಸಲಾಗಿರುವ ಎಕ್ಸ್‌ಪ್ರೆಸ್ ಫೀಡರ್ ಲೈನ್‌ಗೆ ಗುತ್ತಲ ಉಪ ಕೇಂದ್ರದಿಂದ 11 ಕೆ.ವಿ.ವಿ.ಸಿ.ಬಿ. ಹಾಗೂ ಒ.ಡಿ.ಎಸ್. ಅಳವಡಿಸುವ ಕಾಮಗಾರಿಯ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ :**
1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–3/2010–11/2119,ದಿನಾಂಕ: 18/04/2011.
2. ಸರ್ಕಾರದ ಆದೇಶ ಸಂಖ್ಯೆ: ಸನೀಇ 17 ಏನೀಯೋ 2008, ದಿನಾಂಕ:28/03/2008.

ಪ್ರಸ್ತಾವನೆ:

ಹಾವನೂರ ಜಿಲ್ಲೆ ಹಾಗೂ ತಾಲ್ಲೂಕಿನ ಹಾವನೂರ ಏತ ನೀರಾವರಿ ಯೋಜನೆಯ ರೂ.165.00 ಲಕ್ಷ ಮೂಲ ಅಂದಾಜಿಗೆ ಉಲ್ಲೇಖ (2)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಪೈಕಿ ಸಿವಿಲ್ ಕಾಮಗಾರಿಯನ್ನು ಪ್ರತ್ಯೇಕವಾಗಿ ಕೈಗೊಳ್ಳಲಾಗಿದೆ. ಮಂಜೂರಾದ ಅಂದಾಜಿನಲ್ಲಿ ಒದಗಿಸಿರುವ ಇಡಿಗಂಟಿನ ಎದುರಾಗಿ ಎಕ್ಸ್‌ಪ್ರೆಸ್ ಫೀಡರ್ ಲೈನ್‌ಗೆ ಗುತ್ತಲ ಉಪ ಕೇಂದ್ರದಿಂದ 11 ಕೆ.ವಿ.ವಿ.ಸಿ.ಬಿ. ಹಾಗೂ ಒ.ಡಿ.ಎಸ್. ಅಳವಡಿಸುವ ಕಾಮಗಾರಿಯ ಉಪ ಅಂದಾಜಿಗೆ ಪ್ರತ್ಯೇಕವಾಗಿ ಅನುಮೋದನೆಯನ್ನು ಪಡೆದುಕೊಂಡು ಈ ಕಾಮಗಾರಿಯನ್ನು ಕೈಗೊಳ್ಳಲು ಟೆಂಡರ್ ಕರೆಯಲಾಗಿರುತ್ತದೆ. ಧಾರವಾಡ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವದಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ. ಇದಕ್ಕೂ ಮೊದಲು ಹಲವು ಬಾರಿ ಕರೆದ ಟೆಂಡರ್ ಕರೆಗಳಿಗೆ ಯಾವುದೇ ಪ್ರತಿಕ್ರಿಯೆ ದೊರಕಿರುವುದಿಲ್ಲ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 11/02/2011 |
| ಕನ್ನಡ ಪ್ರಭ ದಿನಪತ್ರಿಕೆ | 11/02/2011 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 12/02/2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿದ್ದು, ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 6,57,305/– |
|---|---|---|---|
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಮೋಹನ್ ರಾಮ್ ಮಡಿವಾಳ, ಸೀತಾ ಎಲೆಕ್ಟ್ರಿಕಲ್ಸ್ & ಇಂಜಿನಿಯರಿಂಗ್ ವರ್ಕ್ಸ್, ಪ್ರಥಮ ದರ್ಜೆ ಗುತ್ತಿಗೆದಾರರು | 7,34,994/– | 11.819 ಹೆಚ್ಚು |

ಮೇಲ್ಕಂಡಂತೆ ಶ್ರೀ ಮೋಹನ್ ರಾಮ್ ಮಡಿವಾಳ, ಸೀತಾ ಎಲೆಕ್ಟ್ರಿಕಲ್ಸ್ & ಇಂಜಿನಿಯರಿಂಗ್ ವರ್ಕ್ಸ್, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 11.819 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ.6,57,305/–ಗಳ ಮೇಲೆ ಶೇ.10 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 7,23,036/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 24 ಅಪಿಬಂ 2011(ತಾಂತ್ರಿಕ) ಬೆಂಗಳೂರು, ದಿನಾಂಕ: 12/05/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾವನೂರ ಜಿಲ್ಲೆ ಹಾಗೂ ತಾಲ್ಲೂಕಿನ ಹಾವನೂರ ಏತ ನೀರಾವರಿ ಯೋಜನೆಗೆ ಪ್ರಸ್ತಾಪಿಸಲಾಗಿರುವ ಎಕ್ಸ್‌ಪ್ರೆಸ್ ಫೀಡರ್ ಲೈನ್‌ಗೆ ಗುತ್ತಲ ಉಪ ಕೇಂದ್ರದಿಂದ 11 ಕೆ.ವಿ.ವಿ.ಸಿ.ಬಿ. ಹಾಗೂ ಒ.ಡಿ.ಎಸ್. ಅಳವಡಿಸುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.6,57,305/–ಗಳ ಮೇಲೆ ಶೇ. 10ರಷ್ಟು ಹೆಚ್ಚಿನ ದರದಲ್ಲಿ

ಅಂದರೆ ರೂ.7,23,036/–ಗಳಿಗೆ (ರೂ. ಏಳು ಲಕ್ಷ ಇಪ್ಪತ್ತಮೂರು ಸಾವಿರದ ಮೂವತ್ತಾರು) ಶ್ರೀ ಮೋಹನ್ ರಾಮ್ ಮಡಿವಾಳ, ಸೀತಾ ಎಲೆಕ್ಟ್ರಿಕಲ್ಸ್ & ಇಂಜಿನಿಯರಿಂಗ್ ವರ್ಕ್ಸ್, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ರುದ್ರಮೂರ್ತಿ
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1316

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ ಸೇಡಂ ತಾಲ್ಲೂಕಿನ ಮಾದವಾರ ಗ್ರಾಮದ ಹತ್ತಿರ ಕಡತಾಳ ನಾಲಾಕ್ಕೆ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ :**
1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಪಿಬಿ–14/2011–12/2405, ದಿನಾಂಕ: 05/05/2011.
2. ಸರ್ಕಾರದ ಆದೇಶ ಸಂಖ್ಯೆ: ಸನೀಇ 236 ಮಸಾವಿ 2009(14) ದಿನಾಂಕ: 09/07/2010.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ ಸೇಡಂ ತಾಲ್ಲೂಕಿನ ಮಾದವಾರ ಗ್ರಾಮದ ಹತ್ತಿರ ಕಡತಾಳ ನಾಲಾಕ್ಕೆ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಗುಲ್ಬರ್ಗಾ ಜಿಲ್ಲೆ ಟೆಂಡರ್ ಬುಲೆಟಿನ್ | 12/11/2010 |
| ಕರ್ನಾಟಕ ರಾಜ್ಯ ಪತ್ರ | 11/11/2010 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 12/11/2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ: 11/04/2011ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 95,53,272/– |
|---|---|---|---|---|
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,26,30,912/- |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ / ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ ಹಾಗೂ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಅಮೃತಾ ಕನ್‌ಸ್ಟ್ರಕ್ಷನ್ಸ್ ಒಂದನೇ ದರ್ಜೆ ಗುತ್ತಿಗೆದಾರರು | 1,36,31,207/– | 42.69 ಹೆಚ್ಚು | 7.919 ಹೆಚ್ಚು |

ಮೇಲ್ಕಂಡಂತೆ ಶ್ರೀ ಅಮೃತಾ ಕನ್‌ಸ್ಟ್ರಕ್ಷನ್ಸ್, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 7.919ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಗುತ್ತಿಗೆದಾರರು ದಿನಾಂಕ: 10/05/2011ರಂದು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ.7.90ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,26,30,912/–ಗಳ ಮೇಲೆ ಶೇ. 7.9ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,36,28,754/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 39 ಅಪಿಬಂ 2011(ತಾಂತ್ರಿಕ) ಬೆಂಗಳೂರು, ದಿನಾಂಕ: 12/05/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ ಸೇಡಂ ತಾಲ್ಲೂಕಿನ ಮಾದವಾರ ಗ್ರಾಮದ ಹತ್ತಿರ ಕಡತಾಳ ನಾಲಾಕ್ಕೆ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.1,26,30,912/–ಗಳ ಮೇಲೆ ಶೇ.7.9ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,36,28,754/–ಗಳಿಗೆ (ರೂ. ಒಂದು ಕೋಟಿ ಮೂವತ್ತಾರು ಲಕ್ಷ ಇಪ್ಪತ್ತೆಂಟು ಸಾವಿರದ ಏಳುನೂರ ಐವತ್ತ ನಾಲ್ಕು) ಶ್ರೀ ಅಮೃತಾ ಕನ್‌ಸ್ಟ್ರಕ್ಷನ್ಸ್, ಒಂದನೇ ದರ್ಜೆ ಗುತ್ತಿಗೆದಾರರುರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ರುದ್ರಮೂರ್ತಿ

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್: 1317 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ದಿ. ಮೈಸೂರು ಮ್ಯಾಚ್ ಕಂಪೆನಿ ಲಿಮಿಟೆಡ್, ಶಿವಮೊಗ್ಗ ಇವರು ಮೆ॥ ವೆಸ್ಟರ್ನ್ ಇಂಡಿಯಾ ಪ್ಲೈವುಡ್ಸ್ ಲಿಮಿಟೆಡ್, ಕೇರಳ ಇವರಿಗೆ ಹಣ ಪಾವತಿ ಮಾಡುವ ಬಗ್ಗೆ.

**ಓದಲಾಗಿದೆ :** 1. ಮೆ॥ ಮೈಸೂರು ಮ್ಯಾಚ್ ಕಂಪೆನಿ ಲಿ., ಶಿವಮೊಗ್ಗ ಇವರಿಂದ ಬಂದಿರುವ ಪತ್ರ ಸಂಖ್ಯೆ : CMD/MMC/Valuation/2010-11, ದಿನಾಂಕ 02–07–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 02–07–2010ರ ಪತ್ರದಲ್ಲಿ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ದಿ. ಮೈಸೂರು ಮ್ಯಾಚ್ ಕಂಪೆನಿ ಲಿಮಿಟೆಡ್, ಶಿವಮೊಗ್ಗ ಇವರು ದಿ. ಮೈಸೂರು ಮ್ಯಾಚ್ ಕಂಪೆನಿ ಲಿಮಿಟೆಡ್ ವಿರುದ್ಧ ಮೆ॥ ವೆಸ್ಟರ್ನ್ ಇಂಡಿಯಾ ಪ್ಲೈವುಡ್ಸ್ ಲಿಮಿಟೆಡ್, ಕೇರಳ ಪ್ರಕರಣದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ನೀಡಿದ ತೀರ್ಪಿನಂತೆ ದಿ. ಮೈಸೂರು ಮ್ಯಾಚ್ ಕಂಪೆನಿ ಲಿಮಿಟೆಡ್ ಇವರು ರೂ.15,19,724=98 (ಹದಿನೈದು ಲಕ್ಷದ ಹತ್ತೊಂಬತ್ತು ಸಾವಿರದ ಏಳುನೂರಾ ಇಪ್ಪತ್ತನಾಲ್ಕು ಮತ್ತು ತೊಂಬತ್ತೆಂಟು ಪೈಸೆಗಳು ಮಾತ್ರ) ಗಳನ್ನು ಮೆ॥ ವೆಸ್ಟರ್ನ್ ಇಂಡಿಯಾ ಪ್ಲೈವುಡ್ಸ್ ಲಿಮಿಟೆಡ್, ಕೇರಳ ಇವರಿಗೆ ಪಾವತಿಸಬೇಕೆಂದು ತಿಳಿಸಿ, ದಿ. ಮೈಸೂರು ಮ್ಯಾಚ್ ಕಂಪೆನಿ ಲಿಮಿಟೆಡ್, ಶಿವಮೊಗ್ಗ ಇದು ಈಗಾಗಲೇ ಕೆಲಸವನ್ನು ಸ್ಥಗಿತಗೊಳಿಸಿರುವುದರಿಂದ ಅದರ ಬ್ಯಾಂಕ್ ಖಾತೆಯಲ್ಲಿ ಯಾವುದೇ ಹಣ ಬಾಕಿ ಇರುವುದಿಲ್ಲವೆಂದೂ ಹಾಗೂ ಮಾನ್ಯ ಉಚ್ಚ ನ್ಯಾಯಾಲಯದ ಆದೇಶದನ್ವಯ ಮೆ॥ ವೆಸ್ಟರ್ನ್ ಇಂಡಿಯಾ ಪ್ಲೈವುಡ್ಸ್ ಲಿಮಿಟೆಡ್, ಕೇರಳ ಇವರಿಗೆ ಹಣ ಪಾವತಿಸಲು ರೂ. 15.20 ಲಕ್ಷಗಳನ್ನು (ರೂಪಾಯಿಗಳು ಹದಿನೈದು ಲಕ್ಷ ಇಪ್ಪತ್ತು ಸಾವಿರ ಮಾತ್ರ) ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 77 ಎಫ್‌ಪಿಸಿ 2010, ಬೆಂಗಳೂರು, ದಿನಾಂಕ 18ನೇ ಮೇ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಿ. ಮೈಸೂರು ಮ್ಯಾಚ್ ಕಂಪೆನಿ ಲಿಮಿಟೆಡ್, ಶಿವಮೊಗ್ಗ ಇವರು ಮೆ॥ ವೆಸ್ಟರ್ನ್ ಇಂಡಿಯಾ ಪ್ಲೈವುಡ್ಸ್ ಲಿಮಿಟೆಡ್, ಕೇರಳ ಇವರಿಗೆ ಪಾವತಿಸಲು ರೂ. 15.20 ಲಕ್ಷಗಳನ್ನು (ರೂಪಾಯಿಗಳು ಹದಿನೈದು ಲಕ್ಷ ಇಪ್ಪತ್ತು ಸಾವಿರ ಮಾತ್ರ) ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮಕ್ಕೆ ಸಾಲವಾಗಿ ನೀಡಲು ಹಾಗೂ ಈ ಮೊತ್ತವನ್ನು ದಿ. ಮೈಸೂರು ಮ್ಯಾಚ್ ಕಂಪೆನಿಯ ಆಸ್ತಿಯ ಮಾರಾಟದ ನಂತರ ಸರ್ಕಾರಕ್ಕೆ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮವು ಮರುಪಾವತಿಸುವ ಷರತ್ತಿನೊಂದಿಗೆ 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ 2406–01–001–1–01–051–ಸಾಮಾನ್ಯ ವೆಚ್ಚಗಳು ಅಡಿಯಿಂದ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 520/ವೆಚ್ಚ–5/2011, ದಿನಾಂಕ 25–04–2011 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ರಾಮಕೃಷ್ಣ,**

ಪಿ.ಆರ್. 1331 ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಕಬ್ಬು ಬೆಳೆದ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು 2006-07ನೇ ಸಾಲಿಗೆ.

**ಓದಲಾಗಿದೆ :**

1. ದಿನಾಂಕ 12-04-2007 ರಂದು ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿನ ತೀರ್ಮಾನಗಳು.
2. ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 07 (ಭಾಗ-2), ದಿನಾಂಕ 13-06-07.
3. ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 07 (ಭಾಗ-2), ದಿನಾಂಕ 12-09-07.
4. ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 07 (ಭಾಗ-2) (2), ದಿನಾಂಕ 19-10-07.
5. ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 07 (ಭಾಗ-2) (3), ದಿನಾಂಕ 02-11-07.
6. ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 07 (ಭಾಗ-2) (4), ದಿನಾಂಕ 01-01-08.
7. ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 07 (ಭಾಗ-2), ದಿನಾಂಕ 22-02-08.
8. ಸರ್ಕಾರದ ಆದೇಶ ಸಂಖ್ಯೆ : ಸಿಐ 19 ಎಸ್‌ಜಿಎಫ್ 08 (ಭಾಗ-2), ದಿನಾಂಕ 12-03-08.
9. ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 07 (ಭಾಗ-2), ದಿನಾಂಕ 20-03-08.
10. ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 07 (ಭಾಗ-2) (8), ದಿನಾಂಕ 25-03-08.
11. ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 07 (ಭಾಗ-2) (9), ದಿನಾಂಕ 21.05.2008.
12. ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 2007 (ಭಾಗ-2) (10), ದಿನಾಂಕ 30.06.2008.
13. ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 2007 (ಭಾಗ-2) (11), ದಿನಾಂಕ 24.11.2008.
14. ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 2007 (ಭಾಗ-2) (12), ದಿನಾಂಕ 02.07.2009.
15. ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 2007 (ಭಾಗ-2) (13), ದಿನಾಂಕ 11.08.2009.
16. ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 2007 (ಭಾಗ-2) (14), ದಿನಾಂಕ 25.11.2009.
17. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ ಡಿಎಸ್‌ಕೆ/ಎಸ್‌ಟಿಟಿ/13/ಬಾಗಲಕೋಟೆ/2007-08, ದಿನಾಂಕ 28.02.2009.
18. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ ಡಿಎಸ್‌ಕೆ/ಎಸ್‌ಟಿಟಿ/13/2006-07, ದಿನಾಂಕ 30.04.2009.
19. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ ಡಿಎಸ್‌ಕೆ/ಎಸ್‌ಟಿಟಿ/13-ಬೆಳಗಾವಿ/2007-08, ದಿನಾಂಕ 01.06.2009.
20. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ ಡಿಎಸ್‌ಕೆ/ಎಸ್‌ಟಿಟಿ/13/2007-08, ದಿನಾಂಕ 27.07.2009.
21. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ ಡಿಎಸ್‌ಕೆ/ಎಸ್‌ಟಿಟಿ/ಪರಿಹಾರ-ಚಾಮರಾಜನಗರ/2008-09, ದಿನಾಂಕ 24.09.2009.

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖ (2)ರಿಂದ (6) ರಲ್ಲಿರುವ ದಿನಾಂಕ 13-06-07, 12-09-07, 19-10-07, 02.11.2007 ಮತ್ತು 01-01-08ರ ಸರ್ಕಾರದ ಆದೇಶಗಳಲ್ಲಿ 2006-07ನೇ ಸಾಲಿನ ಸಕ್ಕರೆ ವರ್ಷಕ್ಕೆ ಸಂಬಂಧಿಸಿದಂತೆ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಸಾಗಾಣಿಕೆ ಸಹಾಯಧನ, ರೂ.3,62,18,916/- ರೈತರಿಗೆ ಪರಿಹಾರ ಧನ ರೂ.25,00,00,000/- ಮತ್ತು ಕಾರ್ಖಾನೆಗಳಿಗೆ ಸಹಾಯಧನ ರೂ.21,13,92,000/-ಗಳು ಸೇರಿ ಒಟ್ಟು ರೂ.49,76,10,916/- ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (7) (9) (10) ರಲ್ಲಿರುವ ದಿನಾಂಕ 22-02-08, 20-03-08 ಮತ್ತು 25-03-08 ರ ಸರ್ಕಾರದ ಆದೇಶಗಳಲ್ಲಿ ಕಬ್ಬು ಬೆಳೆದ ರೈತರಿಗೆ ಪರಿಹಾರ ನೀಡಲು ಕ್ರಮವಾಗಿ ರೂ. 7.00 ಕೋಟಿಗಳು, ರೂ. 6.64 ಕೋಟಿಗಳು ಮತ್ತು ರೂ. 1,25,11,000/- ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (8) ರಲ್ಲಿರುವ ದಿನಾಂಕ 12-03-2008ರ ಆದೇಶದಲ್ಲಿ ಕಾರ್ಖಾನೆಗಳು ವಿಸ್ತರಿಸಿದ ಅವಧಿಯ ನಂತರ ಅಂದರೆ ದಿನಾಂಕ 01-06-07 ರಿಂದ 31-07-07ರ ಅವಧಿಯಲ್ಲಿ ನುರಿಸಿದ ಕಬ್ಬಿಗೆ ರೂ. 8.75 ಕೋಟಿಗಳ ಸಹಾಯಧನ ಬಿಡುಗಡೆಗೆ ಮಂಜೂರಾತಿ ನೀಡಲಾಗಿದ್ದು, ಅದರಂತೆ ಮೇಲೆ ಓದಲಾದ (10)ರಲ್ಲಿರುವ ದಿನಾಂಕ 25-03-08ರ ಸರ್ಕಾರದ ಆದೇಶದಲ್ಲಿ ಪ್ರತಿ ಟನ್ ಕಬ್ಬಿಗೆ ರೂ.100/- ನಂತೆ ರೂ. 8,74,92,000/- ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (11) ರಲ್ಲಿರುವ ದಿನಾಂಕ 21-05-2008ರ ಆದೇಶದಲ್ಲಿ ಕಾರ್ಖಾನೆಗಳು ವಿಸ್ತರಿಸಿದ ಅವಧಿಯಲ್ಲಿ ನಂತರ ಅಂದರೆ 16-04-2007 ರಿಂದ 31-05-2007ರ ಅವಧಿಯಲ್ಲಿ ನುರಿಸಿದ ಕಬ್ಬಿಗೆ ಪ್ರತಿ ಟನ್ ಕಬ್ಬಿಗೆ ರೂ.100/- ನಂತೆ ರೂ. 10,00,00,000/-ಗಳ ಸಹಾಯಧನವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (12) ರಲ್ಲಿರುವ ದಿನಾಂಕ 30-06-2008ರ ಆದೇಶದಲ್ಲಿ ಬಿಜಾಪುರ, ಮೈಸೂರು ಮತ್ತು ಬೆಳಗಾಂ ಜಿಲ್ಲೆಗಳ ರೈತರಿಗೆ ಪರಿಹಾರಧನ ಮತ್ತು ಸಾಗಾಣಿಕೆ ಸಹಾಯಧನ ನೀಡಲು ರೂ.3.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (13) ರಲ್ಲಿರುವ ದಿನಾಂಕ 24-11-2008ರ ಆದೇಶದಲ್ಲಿ ರೈತರಿಗೆ ಪರಿಹಾರಧನ ಮತ್ತು ಸಾಗಾಣಿಕೆ ಸಹಾಯಧನ ನೀಡಲು ರೂ. 3,03,73,203/- ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (14) ರಲ್ಲಿರುವ ದಿನಾಂಕ 02-07-2009ರ ಆದೇಶದಲ್ಲಿ ಬಿಜಾಪುರ, ಗುಲ್ಬರ್ಗಾ, ಬೆಳಗಾಂ ಜಿಲ್ಲೆಗಳಿಂದ ಮಹಾರಾಷ್ಟ್ರ ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಮತ್ತು ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಸರಬರಾಜು ಮಾಡಿದ ಪ್ರತಿ ಟನ್‌ಗೆ ರೂ. 2/-ರಂತೆ ಸಾಗಾಣಿಕೆ ಸಹಾಯಧನ ರೂ. 1,81,07,599/- ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (15) ರಲ್ಲಿರುವ ದಿನಾಂಕ 11–08–2009ರ ಆದೇಶದಲ್ಲಿ ಬಿಜಾಪುರ ಜಿಲ್ಲೆಯ ಇಂಡಿ ಮತ್ತು ಸಿಂಧಗಿ ತಾಲ್ಲೂಕಿನ ಕಬ್ಬು ಬೆಳೆದು ಕಟಾವಾಗದೆ ಜಮೀನಿನಲ್ಲಿಯೇ ಉಳಿದು ನಷ್ಟವಾದ ಕಬ್ಬಿಗೆ ಪ್ರತಿ ಹೆಕ್ಟೇರಿಗೆ ರೂ.25,000/–ಗಳಂತೆ ರೈತರಿಗೆ ಪಾವತಿಸುವ ಸಲುವಾಗಿ ರೂ. 15.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (16) ರಲ್ಲಿರುವ ದಿನಾಂಕ 25–11–2009ರ ಆದೇಶದಲ್ಲಿ ಬೆಳಗಾವಿ, ಬಿಜಾಪುರ, ಬಾಗಲಕೋಟೆ, ಧಾರವಾಡ, ಗುಲ್ಬರ್ಗಾ ಜಿಲ್ಲೆಗಳ ರೈತರಿಗೆ ಹಾಗೂ ಮೈಸೂರು ಜಿಲ್ಲೆಯ ಬನ್ನಾರಿ ಅಮ್ಮನ್ ಶುಗರ್ಸ್ ಈ ಕಾರ್ಖಾನೆಗೆ ಸಾಗಾಣಿಕೆ ಸಹಾಯಧನವನ್ನು ಪಾವತಿಸುವ ಸಲುವಾಗಿ ಒಟ್ಟು ರೂ.97,83,455/– ಗಳನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (17) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ದಿನಾಂಕ 28–02–09ರ ಪತ್ರದಲ್ಲಿ ಬಾಗಲಕೋಟೆ ಜಿಲ್ಲೆಯ ಬಾದಾಮಿ ಮತ್ತು ಬೀಳಗಿ ತಾಲ್ಲೂಕುಗಳಲ್ಲಿ ಕಬ್ಬು ಬೆಳೆದು ಕಟಾವಾಗದೆ ಜಮೀನಿನಲ್ಲಿಯೇ ಉಳಿದು ನಷ್ಟವಾದ ಕಬ್ಬಿಗೆ ಪ್ರತಿ ಹೆಕ್ಟೇರಿಗೆ ರೂ. 25,000/– ಗಳಂತೆ ರೈತರಿಗೆ ಪಾವತಿಸುವ ಸಲುವಾಗಿ ರೂ.3,12,750/–ಗಳನ್ನು ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿದ್ದಾರೆ.

ಮೇಲೆ ಓದಲಾದ (18) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ದಿನಾಂಕ 30–04–09ರ ಪತ್ರದಲ್ಲಿ ಧಾರವಾಡ ಜಿಲ್ಲೆಯ ಹುಬ್ಬಳ್ಳಿ ತಾಲ್ಲೂಕಿನಲ್ಲಿ ಕಬ್ಬು ಬೆಳೆದು ಕಟಾವಾಗದೆ ಜಮೀನಿನಲ್ಲಿಯೇ ಉಳಿದು ನಷ್ಟವಾದ ಕಬ್ಬಿಗೆ ಪ್ರತಿ ಹೆಕ್ಟೇರಿಗೆ ರೂ. 25,000/–ಗಳಂತೆ ಪರಿಹಾರಧನ ರೈತರಿಗೆ ಪಾವತಿಸುವ ಸಲುವಾಗಿ ರೂ.44,750/–ಗಳನ್ನು ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿದ್ದಾರೆ.

ಮೇಲೆ ಓದಲಾದ (19) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ದಿನಾಂಕ 01–06–09ರ ಪತ್ರದಲ್ಲಿ ಬೆಳಗಾಂ ಜಿಲ್ಲೆಯ ಗೋಕಾಕ್ ತಾಲ್ಲೂಕಿನಲ್ಲಿ ಕಬ್ಬು ಬೆಳೆದು ಕಟಾವಾಗದೆ ಜಮೀನಿನಲ್ಲಿಯೇ ಉಳಿದು ನಷ್ಟವಾದ ಕಬ್ಬಿಗೆ ಪ್ರತಿ ಹೆಕ್ಟೇರಿಗೆ ರೂ. 25,000/–ಗಳಂತೆ ಪರಿಹಾರಧನ ರೈತರಿಗೆ ಪಾವತಿಸಲು ಬಾಕಿ ಉಳಿದಿರುವ ರೂ.2,37,96,250/–ಗಳನ್ನು ಜಿಲ್ಲಾಧಿಕಾರಿಗಳು, ಬೆಳಗಾಂ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿದ್ದಾರೆ.

ಮೇಲೆ ಓದಲಾದ (20) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ದಿನಾಂಕ 27–07–09ರ ಪತ್ರದಲ್ಲಿ ಹಾಸನ ಜಿಲ್ಲೆಯ ಅರಸೀಕೆರೆ, ಆಲೂರು, ಹಾಸನ, ಸಕಲೇಶಪುರ, ಅರಕಲಗೂಡು, ಹೊಳೆನರಸೀಪುರ, ಚನ್ನರಾಯಪಟ್ಟಣ, ಬೇಲೂರು ತಾಲ್ಲೂಕುಗಳಲ್ಲಿ ಕಬ್ಬು ಬೆಳೆದು ಕಟಾವಾಗದೆ ಜಮೀನಿನಲ್ಲಿಯೇ ಉಳಿದು ನಷ್ಟವಾದ ಕಬ್ಬಿಗೆ ಪ್ರತಿ ಹೆಕ್ಟೇರಿಗೆ ರೂ. 25,000/– ಗಳಂತೆ ಪರಿಹಾರಧನ ರೈತರಿಗೆ ಪಾವತಿಸುವ ಸಲುವಾಗಿ ರೂ.6,55,89,061/–ಗಳನ್ನು ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿದ್ದಾರೆ.

ಮೇಲೆ ಓದಲಾದ (21) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ದಿನಾಂಕ 24–09–09ರ ಪತ್ರದಲ್ಲಿ ಚಾಮರಾಜನಗರ ಜಿಲ್ಲೆಯ ಉಡಗಾಲ ಮತ್ತು ಆಲೂರು ಗ್ರಾಮಗಳಲ್ಲಿ ಕಬ್ಬು ಬೆಳೆದು ಕಟಾವಾಗದೆ ಜಮೀನಿನಲ್ಲಿಯೇ ಉಳಿದು ನಷ್ಟವಾದ ಕಬ್ಬಿಗೆ ಪ್ರತಿ ಹೆಕ್ಟೇರಿಗೆ ರೂ. 25,000/– ಗಳಂತೆ ಪರಿಹಾರಧನ ರೈತರಿಗೆ ಪಾವತಿಸುವ ಸಲುವಾಗಿ ರೂ.3,65,000/–ಗಳನ್ನು ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 2007 (ಭಾಗ–2) (15), ಬೆಂಗಳೂರು, ದಿನಾಂಕ 13ನೇ ಮೇ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ 2006–07ನೇ ಸಾಲಿನ ಸಕ್ಕರೆ ವರ್ಷದಲ್ಲಿ 12 ತಿಂಗಳು ಪೂರೈಸಿ ಪಕ್ವವಾದ ಕಟಾವಾಗದೆ ಜಮೀನಿನಲ್ಲಿ ಉಳಿದು ನಷ್ಟವಾದ ಕಬ್ಬಿಗೆ ಮೇಲೆ ಓದಲಾದ (17), (18), (19), (20) ಮತ್ತು (21) ರಲ್ಲಿರುವ ಆಯುಕ್ತರ ಪ್ರಸ್ತಾವನೆಯಲ್ಲಿ ಶಿಫಾರಸ್ಸು ಮಾಡಿರುವ ಮೊತ್ತದಲ್ಲಿ ಶೇ. 50 ರಷ್ಟು ಪರಿಹಾರಧನ ರೂ.4,50,53,932/–ಗಳನ್ನು (ನಾಲ್ಕು ಕೋಟಿ ಐವತ್ತು ಲಕ್ಷ ಐವತ್ತ ಮೂರು ಸಾವಿರ ಒಂಭೈನೂರ ಮೂವತ್ತ ಎರಡು ರೂಪಾಯಿಗಳು ಮಾತ್ರ) ಈ ಕೆಳಕಂಡ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

**<u>ಪರಿಹಾರ ಧನ</u>** (ರೂ.ಗಳಲ್ಲಿ)

| ಜಿಲ್ಲೆಯ ಹೆಸರು | ಮೊತ್ತ | ಜಿಲ್ಲಾಧಿಕಾರಿ/ಜಿಲ್ಲೆ |
|---|---|---|
| 1. ಬಾಗಲಕೋಟೆ ಜಿಲ್ಲೆ (ರೈತರಿಗೆ) | 1,56,400–00 | ಜಿಲ್ಲಾಧಿಕಾರಿ, ಬಾಗಲಕೋಟೆ |
| 2. ಧಾರವಾಡ ಜಿಲ್ಲೆ (ರೈತರಿಗೆ) | 22,375–00 | ಜಿಲ್ಲಾಧಿಕಾರಿ, ಧಾರವಾಡ |
| 3. ಬೆಳಗಾವಿ ಜಿಲ್ಲೆ (ರೈತರಿಗೆ) | 1,18,98,125–00 | ಜಿಲ್ಲಾಧಿಕಾರಿ, ಬೆಳಗಾವಿ |
| 4. ಹಾಸನ ಜಿಲ್ಲೆ (ರೈತರಿಗೆ) | 3,27,94,532–00 | ಜಿಲ್ಲಾಧಿಕಾರಿ, ಹಾಸನ |
| 5. ಚಾಮರಾಜನಗರ ಜಿಲ್ಲೆ (ರೈತರಿಗೆ) | 1,82,500–00 | ಜಿಲ್ಲಾಧಿಕಾರಿ, ಚಾಮರಾಜನಗರ |
| **ಒಟ್ಟು** | **4,50,53,932–00** | |

2011–12ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ **"2852–08–201–0–07 (ಯೋಜನೆ)"** ಸಹಾಯಧನ ಅಡಿಯಲ್ಲಿ ರೂ.21.75 ಕೋಟಿಗಳನ್ನು ಒದಗಿಸಲಾಗಿದ್ದು, ಈ ಹಣದಲ್ಲಿ ಮೇಲಿನಂತೆ ರೂ.4,50,53,932/– ಗಳನ್ನು ರೈತರಿಗೆ ಪರಿಹಾರಧನವಾಗಿ ಬಿಡುಗಡೆ ಮಾಡಲು ಮಂಜೂರು ಮಾಡಲಾಗಿದೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬಿಡುಗಡೆ ಮಾಡಲಾದ ಈ ಹಣವನ್ನು ಸರ್ಕಾರದ ಆದೇಶ ದಿನಾಂಕ 13–06–2007 ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳನ್ವಯ ಪರಿಶೀಲಿಸಿ, ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು

ಕ್ರಮವಹಿಸತಕ್ಕದ್ದು. ಈ ಹಣವನ್ನು ಕಬ್ಬು ಬೆಳೆದು ಕಟಾವಾಗದೆ ಜಮೀನಿನಲ್ಲಿಯೇ ಉಳಿದು ನಷ್ಟವಾದ ಕಬ್ಬಿಗೆ ಪ್ರತಿ ಹೆಕ್ಟೇರಿಗೆ ರೂ.12,500/– ಗಳಂತೆ ಪರಿಹಾರಧನ ರೈತರಿಗೆ ಪಾವತಿಸಲು ಉಪಯೋಗಿಸತಕ್ಕದ್ದು. ವಿತರಿಸಲಾದ ಹಣದ ವಿವರವನ್ನು ಆಯುಕ್ತರು ಕಬ್ಬು ಅಭಿವೃದ್ಧಿ ರವರು ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ವರದಿ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 64 ವೆಚ್ಚ–1/2011, ದಿನಾಂಕ 09–02–11 ರಲ್ಲಿ ಮತ್ತು ಆಇ 748–ವೆಚ್ಚ–1/2011, ದಿನಾಂಕ 03–05–2011 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶೈಲಜಾ ಡಿ. ಬೋರ್ಕರ್,**
ಪೀಠಾಧಿಕಾರಿ (ಸಕ್ಕರೆ) (ಪ್ರ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 1332

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** 2011–12ನೇ ಸಾಲಿಗೆ ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಗೆ ಯೋಜನೇತರರಡಿಯಲ್ಲಿ ಒದಗಿಸಲಾಗಿರುವ ಆಯವ್ಯಯದ ಮೊದಲನೇ ತ್ರೈಮಾಸಿಕ ಕಂತು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಅಧಿಕ ನಿರ್ದೇಶಕರು (ವಿಶ್ವ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಕೈವಾಇ/ವಿಶ್ವ/153/ಯೋಜನೇತರ/ಆಯವ್ಯಯ/2011–12, ದಿನಾಂಕ 23–4–2011.
2. ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಬೆಂಗಳೂರು ಇವರ ಪತ್ರ ಸಂಖ್ಯೆ : ಖಾಮಂಲೆಪ:ಸಂಕಲನ:ಆಯವ್ಯಯ/ 121/2010–11, ದಿನಾಂಕ 7–4–2011.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಪತ್ರದಲ್ಲಿ ಅಧಿಕ ನಿರ್ದೇಶಕರು (ವಿಶ್ವ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರು ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಗೆ 2011–12ನೇ ಸಾಲಿನಲ್ಲಿ ಮೊದಲನೇ ತ್ರೈಮಾಸಿಕವು ದಿನಾಂಕ 1–4–2011 ರಿಂದ ಪ್ರಾರಂಭವಾಗಿರುವುದರಿಂದ ಮಂಡಳಿಯ ಸಿಬ್ಬಂದಿ ವೇತನ, ನಿವೃತ್ತ ನೌಕರರ ಪಿಂಚಣಿ, ಪ್ರವಾಸ ಭತ್ಯೆ ಮತ್ತು ಕಛೇರಿ ಸಾದಿಲ್ವಾರು ಮುಂತಾದ ಖರ್ಚುಗಳನ್ನು ಭರಿಸಲು ಮಂಡಳಿಯಲ್ಲಿ ಹಣವಿಲ್ಲದಿರುವುದರಿಂದ, ಖಾದಿ ಮಂಡಳಿಯು ಸರ್ಕಾರದ ಅನುದಾನವನ್ನೇ ಅವಲಂಬಿಸಿರುವುದರಿಂದ 2011–12ನೇ ಸಾಲಿನ ಆಯವ್ಯಯದಲ್ಲಿ ಹಂಚಿಕೆ ಮಾಡಲಾಗಿರುವ ₹ 10.00 ಕೋಟಿಗಳಲ್ಲಿ ಮೊದಲನೇ ತ್ರೈಮಾಸಿಕ ಕಂತು ₹ 250.00 ಲಕ್ಷಗಳನ್ನು ಲೆಕ್ಕಶೀರ್ಷಿಕೆ 2851–00–105–0–01–101 (ಯೋಜನೇತರ) ರಡಿ ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಬೆಂಗಳೂರು ಇವರು ಕೋರಿರುತ್ತಾರೆಂದು ತಿಳಿಸುತ್ತಾ, ಸದರಿ ಅನುದಾನ ಬಿಡುಗಡೆ ಮಾಡಬೇಕೆಂದು ಕೋರಿ ತಃಖ್ತೆಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 29 ಎಸ್‌ಎಲ್‌ವಿ 2011, ಬೆಂಗಳೂರು, ದಿನಾಂಕ 12ನೇ ಮೇ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಬೆಂಗಳೂರು ಇವರಿಗೆ 2011–12ನೇ ಸಾಲಿನಲ್ಲಿ ಸಿಬ್ಬಂದಿ ವೇತನ, ನಿವೃತ್ತ ನೌಕರರ ಪಿಂಚಣಿ, ಪ್ರವಾಸ ಭತ್ಯೆ ಮತ್ತು ಕಛೇರಿಯ ಸಾದಿಲ್ವಾರು ವೆಚ್ಚ ಮುಂತಾದ ಖರ್ಚುಗಳನ್ನು ಭರಿಸಲು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 2851–00–105–0–01–101 (ಯೋಜನೇತರ) ರಡಿ ಮೊದಲನೇ ತ್ರೈಮಾಸಿಕ ಕಂತು ₹ 250.00 ಲಕ್ಷ (ಎರಡು ನೂರ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಹಣ ಸ್ವೀಕೃತಿ ರಶೀತಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಯಿಂದ ಹಣ ಪಡೆಯಲು ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರು ಸದರಿ ಮಂಡಳಿಯು ಅನುದಾನವನ್ನು ಸದ್ಬಳಕೆ ಮಾಡುತ್ತಿದೆಯೇ ಎಂಬ ಬಗ್ಗೆ ಮಂಡಳಿಯ ಕಾರ್ಯಕ್ಷಮತೆಯನ್ನು ಖಚಿತಪಡಿಸಿಕೊಳ್ಳತಕ್ಕದ್ದು.

ಹಣ ವೆಚ್ಚ ಮಾಡಿದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರವನ್ನು (Utilization Certificate) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಗೆ ಹಾಗೂ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 753 Exp-I/11, ದಿನಾಂಕ : 4–5–2011 ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಆರ್. ಚಂದ್ರಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ (ಸಪ್ರಕೈ) (ಪ್ರಭಾರ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 1333

## ಸಹಕಾರ ಸಚಿವಾಲಯ

**ವಿಷಯ :** ಹುಣಸೂರು ತಾಲ್ಲೂಕಿನ ಗಾಣಿಗರ ಸಂಘ, ಶಿವಜ್ಯೋತಿ ನಗರ, ಹುಣಸೂರು ಇದರ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸಇ 146 ಸಿಎಸ್‌ಆರ್ 2009, ದಿನಾಂಕ 22–04–2010.

**2.** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಆರ್‌ಸಿಎಸ್/ಎಡಿಎಂ/138/ಎಸ್‌ಓಆರ್/ 2009–10, ದಿನಾಂಕ 18–02–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಹುಣಸೂರು ತಾಲ್ಲೂಕಿನ ಗಾಣಿಗರ ಸಂಘದ ಆಡಳಿತ ಮಂಡಳಿಯ ಕಾರ್ಯಚಟುವಟಿಕೆ, ಹಣಕಾಸಿನ ಲೆಕ್ಕಾಚಾರ, ಖರ್ಚು ವೆಚ್ಚ ಹಣಕಾಸಿನ ಕಾರ್ಯಕಾರಿ ಸಮಿತಿ ಇವುಗಳಲ್ಲಿ ಭಿನ್ನಾಭಿಪ್ರಾಯ ಇರುವುದರಿಂದ ಈ ಸಂಸ್ಥೆಯ ಹಿತದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ರಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಸಂಸ್ಥೆಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹುಣಸೂರು ಉಪ ವಿಭಾಗ ಇವರನ್ನು ಆಡಳಿತಾಧಿಕಾರಿಯನ್ನಾಗಿ 6 ತಿಂಗಳ ಅವಧಿಗೆ ನೇಮಿಸಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹುಣಸೂರು ಇವರನ್ನು 6 ತಿಂಗಳ ಅವಧಿಗೆ ಹುಣಸೂರು ತಾಲ್ಲೂಕಿನ ಗಾಣಿಗರ ಸಂಘಕ್ಕೆ ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸದರಿಯವರು ದಿನಾಂಕ 12–07–2010 ರಂದು ಸ್ವಯಂ ಪ್ರಭಾರ ವಹಿಸಿಕೊಂಡಿದ್ದು ವಾಸ್ತವವಾಗಿ ದಿನಾಂಕ 17–01–2011 ಕ್ಕೆ 6 ತಿಂಗಳ ಅವಧಿ ಕೊನೆಗೊಂಡಿರುತ್ತದೆ. ಸದರಿ ಸಂಘದ ಆಡಳಿತ ಮಂಡಳಿಯನ್ನು ಪುನರ್ ರಚಿಸುವ ಸಂಬಂಧ ಚುನಾವಣೆ ನಡೆಸಲು ಕಾಲಾವಕಾಶ ಬೇಕಾಗಿರುವುದರಿಂದ ಸದರಿ ಆಡಳಿತಾಧಿಕಾರಿಗಳು ದಿನಾಂಕ 06–01–2011ರ ಪತ್ರದಲ್ಲಿ ಕೋರಿರುವುದಾಗಿ ಸಹಕಾರ ಸಂಘಗಳ ಉಪ ನಿಬಂಧಕರು, ಮೈಸೂರು ಜಿಲ್ಲೆ ಇವರು ವರದಿಸಿದ್ದು, ಈ ವರದಿಗೆ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರು ಶಿಫಾರಸು ಮಾಡಿ ಹುಣಸೂರು ತಾಲ್ಲೂಕಿನ ಗಾಣಿಗರ ಸಂಘ, ಹುಣಸೂರು ಇದರ ಆಡಳಿತಾಧಿಕಾರಿಗಳ ಅವಧಿಯನ್ನು 6 ತಿಂಗಳುಗಳಿಗೆ ವಿಸ್ತರಿಸಲು ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ದಿನಾಂಕ 12–07–2010 ರಂದು ಸಂಘದ ಆಡಳಿತಾಧಿಕಾರಿಯಾಗಿ ಅಧಿಕಾರ ವಹಿಸಿಕೊಂಡಿದ್ದು ದಿನಾಂಕ 11–01–2011 ಕ್ಕೆ 6 ತಿಂಗಳ ಅವಧಿ ಪೂರ್ಣಗೊಂಡಿದ್ದು ದಿನಾಂಕ 12–01–2011 ರಿಂದ ಮತ್ತೆ 6 ತಿಂಗಳ ಅವಧಿಗೆ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 146 ಸಿಎಸ್‌ಆರ್ 2009, ಬೆಂಗಳೂರು, ದಿನಾಂಕ 21ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹುಣಸೂರು ತಾಲ್ಲೂಕಿನ ಗಾಣಿಗರ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ 1960ರ ಕಲಂ 27(ಎ) ಅನ್ವಯ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹುಣಸೂರು ಉಪ ವಿಭಾಗ, ಹುಣಸೂರು ಇವರನ್ನು ಆಡಳಿತಾಧಿಕಾರಿಯನ್ನಾಗಿ ದಿನಾಂಕ 12–01–2011 ರಿಂದ ಮುಂದಿನ ಆರು (6) ತಿಂಗಳ ಅವಧಿಗೆ ಅಥವಾ ಸದರಿ ಅವಧಿಯಲ್ಲಿ ಸಂಘದಲ್ಲಿ ಹಾಲಿ ಇರುವ ಸದಸ್ಯರಿಂದ ಸಂಘಕ್ಕೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ. ಆಡಳಿತಗಾರರು ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮಗಳ ಅವಕಾಶದಂತೆ ಕಾರ್ಯನಿರ್ವಹಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಂಜುಂಡಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ.ಆರ್. 1334

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಯಲಹಂಕ ಗ್ರಾಮದ ಸ.ನಂ.144 ರಲ್ಲಿ 0.11 ಗುಂಟೆ ಬಿ. ಖರಾಬ್ ಜಮೀನನ್ನು ದಿ ಸ್ಟಾಂಡರ್ಡ್ ಬ್ರಿಕ್ ಕಂಪನಿ ಅಂಡ್ ಟೈಲ್ ಕಂಪನಿ (ಯಲಹಂಕ) ಪ್ರೈವೇಟ್ ಲಿಮಿಟೆಡ್ ಇವರಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ : ಎಲ್‌ಎನ್‌ಡಿ (ಎನ್‌ಎ) ಸಿಆರ್ 187/2007–08, ದಿನಾಂಕ 21–10–2008.

2. ದಿ ಸ್ಟಾಂಡರ್ಡ್ ಬ್ರಿಕ್ ಅಂಡ್ ಟೈಲ್ ಕಂಪನಿ (ಯಲಹಂಕ) ಪ್ರೈ. ಲಿ., ಯಲಹಂಕ ಇವರ ಮನವಿ ದಿನಾಂಕ 05–01–2009.

ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 21.10.2008ರ ಪತ್ರದಲ್ಲಿ ಸಲ್ಲಿಸಿದ ಪ್ರಸ್ತಾವನೆಯಲ್ಲಿ ಯಲಹಂಕ ಗ್ರಾಮದ ಸ.ನಂ. 144 ರ ಮಧ್ಯ ಭಾಗದಲ್ಲಿ 11 ಗುಂಟೆ ಬಿ. ಖರಾಬ್ ಜಮೀನು ಹಾದು ಹೋಗುವುದರಿಂದ ಎರಡೂ ಕಡೆ ಸ್ಟಾಂಡರ್ಡ್ ಬ್ರಿಕ್ ಅಂಡ್ ಟೈಲ್ ಕಂಪನಿ (ಯಲಹಂಕ) ಪ್ರೈ. ಲಿ., ಇವರಿಗೆ ಸೇರಿದ ಜಮೀನು ಇರುವುದರಿಂದ ಬಿ. ಖರಾಬ್ ಜಮೀನನ್ನು ಕಲಂ 68 (5)ರ ಅಡಿಯಲ್ಲಿ ಸಾರ್ವಜನಿಕ ಹಿತಾಸಕ್ತಿಯಿಂದ ವಿಹಿತಗೊಳಿಸಲು ಹಾಗೂ ಈ ಸಂಸ್ಥೆಗೆ ಕಿಮ್ಮತ್ತು ವಿಧಿಸಿ ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

2. ದಿ ಸ್ಟಾಂಡರ್ಡ್ ಬ್ರಿಕ್ ಅಂಡ್ ಟೈಲ್ ಕಂಪನಿ (ಯಲಹಂಕ) ಪ್ರೈ. ಲಿ., ಯಲಹಂಕ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಮನವಿ ದಿನಾಂಕ 05-01-2009 ರಲ್ಲಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಯಲಹಂಕ ಗ್ರಾಮದ ಸ.ನಂ.144 ರಲ್ಲಿನ ಜಮೀನಿನಲ್ಲಿ ಸುಮಾರು 80 ವರ್ಷಗಳಿಂದ ಇಟ್ಟಿಗೆ ಕಾರ್ಖಾನೆಯನ್ನು ನಡೆಸಿಕೊಂಡು ಬರುತ್ತಿದ್ದು, ಸದರಿ ಸ್ವತ್ತಿನ ಮಧ್ಯ ಭಾಗದಲ್ಲಿ ಬಿ. ಖರಾಬು ಎಂದು ನಕಾಶೆಯಲ್ಲಿ ನಮೂದಾಗಿರುವ 11 ಗುಂಟೆ ಜಮೀನನ್ನು ಮೊದಲಿನಿಂದಲೂ ಸಂಸ್ಥೆಯು ಉಪಯೋಗಿಸಿಕೊಂಡಿರುವುದಾಗಿ ತಿಳಿಸಿ, ಸದರಿ ಬಿ. ಖರಾಬ್ ಜಮೀನನ್ನು ಕೈಗಾರಿಕಾ ಉದ್ದೇಶಕ್ಕಾಗಿ ಮಂಜೂರು ಮಾಡುವಂತೆ ಕೋರಿರುತ್ತಾರೆ. ಸದರಿ ಕಂಪನಿಯು ಕಂಪನಿ ಕಾಯ್ದೆ ಅಡಿಯಲ್ಲಿ 28-07-1939 ರಲ್ಲಿ ನೋಂದಣಿಯಾಗಿದ್ದು, ಕಳೆದ 5 ವರ್ಷಗಳ ಆಡಿಟ್ ವರದಿಯನ್ನು ಲಗತ್ತಿಸಿ ಕಳುಹಿಸಿರುತ್ತಾರೆ.

3. ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಯಲಹಂಕ ಗ್ರಾಮದ ಸ.ನಂ.144 ರ ಮಧ್ಯ ಭಾಗದಲ್ಲಿನ 0.11 ಗುಂಟೆ ಬಿ. ಖರಾಬ್ ಜಮೀನನ್ನು ಸಾರ್ವಜನಿಕ ಹಿತಾಸಕ್ತಿಯಿಂದ ವಿಹಿತಗೊಳಿಸಲು ಕರ್ನಾಟಕ ಭೂ ಕಂದಾಯ ಕಾಯ್ದೆಯ ಕಲಂ 68(1)ರ ಅಡಿಯಲ್ಲಿ ದಿನಾಂಕ 17-04-2008 ರಲ್ಲಿ ತಹಶೀಲ್ದಾರ್, ಯಲಹಂಕ ಇವರು ನಮೂನೆ 27ರಲ್ಲಿ ಅಧಿಸೂಚನೆಯನ್ನು ಹೊರಡಿಸಿರುತ್ತಾರೆ. ಸದರಿ ಅಧಿಸೂಚನೆಗೆ ಅನುಗುಣವಾಗಿ ಯಾವುದೇ ಆಕ್ಷೇಪಣೆಗಳು ಬಂದಿಲ್ಲವಾದ್ದರಿಂದ ಸದರಿ ಜಮೀನನ್ನು ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಲು ಕರ್ನಾಟಕ ಭೂ ಕಂದಾಯ ಕಾಯ್ದೆಯ ಕಲಂ 68(5)ರ ಅಡಿಯಲ್ಲಿ ದಿನಾಂಕ 23-12-2008 ರಂದು ಅಧಿಸೂಚನೆಯನ್ನು ಹೊರಡಿಸಲಾಗಿರುತ್ತದೆ.

ಸದರಿ ಜಮೀನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಬರುತ್ತದೆ. ಸರ್ಕಾರದ ಹಿಂದಿನ ಕಾರ್ಯದರ್ಶಿ, ಕಂದಾಯ ಇಲಾಖೆ ಇವರು ದಿನಾಂಕ 24-02-2010 ರಂದು ಸ್ಥಳ ಪರಿಶೀಲನೆ ನಡೆಸಿದ್ದು, ದಿ ಸ್ಟಾಂಡರ್ಡ್ ಬ್ರಿಕ್ ಅಂಡ್ ಟೈಲ್ ಕಂಪನಿ (ಯಲಹಂಕ) ಪ್ರೈ. ಲಿ., ಇವರು ಸ.ನಂ. 144, 145, 146, 147 ಮತ್ತು 148 ರಲ್ಲಿನ ಪೂರ್ಣ ಜಮೀನನ್ನು ಇಟ್ಟಿಗೆ ತಯಾರಿಸಲು ಸುಮಾರು 75 ವರ್ಷಗಳಿಂದ ಉಪಯೋಗ ಮಾಡುತ್ತಿದ್ದು, ಈಗ ಇಟ್ಟಿಗೆ ತಯಾರಿಕಾ ಘಟಕವನ್ನು ಸ್ಥಗಿತಗೊಳಿಸಿರುವುದಾಗಿ, ಬಿ. ಖರಾಬ್ ಜಮೀನನ್ನು ಈಗಾಗಲೇ ತಿಳಿಸಿದಂತೆ ನಿಖರವಾಗಿ ಗುರುತಿಸಲು ಸಾಧ್ಯವಿಲ್ಲದ ಕಾರಣ ಈ ಜಮೀನನ್ನು ದಿ ಸ್ಟಾಂಡರ್ಡ್ ಬ್ರಿಕ್ ಅಂಡ್ ಟೈಲ್ ಕಂಪನಿ (ಯಲಹಂಕ) ಪ್ರೈ. ಲಿ., ಇವರಿಗೆ ಮಾರುಕಟ್ಟೆ ಬೆಲೆಯಲ್ಲಿ ಮಂಜೂರು ಮಾಡುವುದು ಸೂಕ್ತವೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಹಿರಿಯ ಉಪ ನೋಂದಣಾಧಿಕಾರಿಗಳು, ಯಲಹಂಕ, ಬೆಂಗಳೂರು ಇವರು ದಿನಾಂಕ 27-09-2010ರ ಪತ್ರದಲ್ಲಿ ಯಲಹಂಕ ಗ್ರಾಮದ ಸ.ನಂ.144 ಕ್ಕೆ ಪ್ರತ್ಯೇಕವಾಗಿ ಮಾರ್ಗಸೂಚಿ ಬಲೆಯನ್ನು ನಿಗದಿಪಡಿಸಿರುವುದಿಲ್ಲವೆಂದೂ, ಆದರೆ ಯಲಹಂಕ ಗ್ರಾಮದ ಜಮೀನುಗಳಿಗೆ ಎಕರೆ ಒಂದಕ್ಕೆ ರೂ. 1 ಕೋಟಿ 75 ಲಕ್ಷಗಳೆಂದು ನಿಗದಿಪಡಿಸಿರುವುದಾಗಿ ತಿಳಿಸಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 885 ಎಲ್‌ಜಿಬಿ 2008, ಬೆಂಗಳೂರು, ದಿನಾಂಕ 11ನೇ ಮೇ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಯಲಹಂಕ ಗ್ರಾಮದ ಸ.ನಂ.144 ರಲ್ಲಿನ ಜಮೀನು ಎಕರೆ ಒಂದಕ್ಕೆ ಪ್ರಚಲಿತ ಮಾರುಕಟ್ಟೆ ದರ ರೂ. 1 ಕೋಟಿ 75 ಲಕ್ಷದಂತೆ 0.11 ಗುಂಟೆ (ಎರಡು ತಾಕುಗಳಲ್ಲಿ) ಜಮೀನಿಗೆ ಪ್ರಚಲಿತ ಮಾರುಕಟ್ಟೆ ದರ ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ ಸದರಿ ಜಮೀನನ್ನು ದಿ ಸ್ಟಾಂಡರ್ಡ್ ಬ್ರಿಕ್ ಅಂಡ್ ಟೈಲ್ ಕಂಪನಿ (ಯಲಹಂಕ) ಪ್ರೈ. ಲಿ., ಇವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 22ರನ್ವಯ ಕೈಗಾರಿಕಾ ಉದ್ದೇಶಕ್ಕಾಗಿ ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 487 ವೆಚ್ಚ-7/2010, ದಿನಾಂಕ : 16-07-2010 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ಈಶ್ವರ ನಾಯಕ್,**

ಪಿ.ಆರ್. 1335

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ.ಮಂ.)

## ಕಂದಾಯ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ, ಬಳ್ಳಾರಿ ನಗರದ ಟಿ.ಎಸ್. ನಂ.8 ವಾರ್ಡ್ ನಂ.5, ಬ್ಲಾಕ್ ನಂ.1 ರಲ್ಲಿ ವಿಸ್ತೀರ್ಣ 1-00 ಎಕರೆ ಜಮೀನನ್ನು ಸಿಂಡಿಕೇಟ್ ಗ್ರಾಮೀಣ ಉದ್ಯಮಶೀಲತೆ ಅಭಿವೃದ್ಧಿ ಸಂಸ್ಥೆಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಬಳ್ಳಾರಿ ರವರ ಪತ್ರ ಸಂಖ್ಯೆ : ಕಂ.ಪ.ನಿ./70:09-10, ದಿನಾಂಕ 3-12-2009.
2. ಸರ್ಕಾರದ ಪತ್ರ ಸಂಖ್ಯೆ : ಆರ್‌ಡಿ/41/ಎಲ್‌ಜಿಎಲ್/2008, ದಿನಾಂಕ 21-4-2010.
3. ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ರವರ ಅಧಿಕೃತ ಟಿಪ್ಪಣಿ ಸಂಖ್ಯೆ : ಆರ್‌ಡಿಪಿ/ಟಿಎಸ್/445/2010, ದಿನಾಂಕ 18-12-2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಬಳ್ಳಾರಿ ರವರು ಬಳ್ಳಾರಿ ಜಿಲ್ಲೆ, ಬಳ್ಳಾರಿ ನಗರದ ಟಿ.ಎಸ್.ನಂ. 8 ವಾರ್ಡ್ ನಂ. 5, ಬ್ಲಾಕ್ ನಂ.1 ರಲ್ಲಿ 1-00 ಎಕರೆ ಜಮೀನನ್ನು ಸಿಂಡಿಕೇಟ್ ಗ್ರಾಮೀಣ ಉದ್ಯಮಶೀಲತೆ ಅಭಿವೃದ್ಧಿ ಸಂಸ್ಥೆಗೆ ಮಂಜೂರು ಮಾಡಲು ಸರ್ಕಾರಕ್ಕೆ

ಪ್ರಸ್ತಾವನೆ ಸಲ್ಲಿಸುತ್ತಾ ಈ ಸಂಸ್ಥೆಯ ಯೋಜನೆ ಉದ್ದೇಶವು ಗ್ರಾಮೀಣ ಪ್ರದೇಶದ ಜಿಲ್ಲಾ ಕೈಗಾರಿಕಾ ಕೇಂದ್ರದ ಆವರಣದಲ್ಲಿ ನಿರುದ್ಯೋಗಿ ಯುವಕ–ಯುವತಿಯರಿಗೆ ಸ್ವಯಂ ಉದ್ಯೋಗ ತರಬೇತಿ ಶಿಕ್ಷಣವನ್ನು ಉಚಿತವಾಗಿ ಕೊಡುತ್ತಿದ್ದು ಕರ್ನಾಟಕ ಸರ್ಕಾರವು ಈಗಾಗಲೇ ಕಟ್ಟಡ ಸ್ಥಾಪಿಸಲು ರೂಡ್‌ಸೆಟಿ ಸ್ಥಾಪನೆಗಾಗಿ ಕೇಂದ್ರ ಸರ್ಕಾರದ ವತಿಯಿಂದ ಸಿಂಡಿಕೇಟ್ ಬ್ಯಾಂಕ್ ಬಳ್ಳಾರಿ ರವರಿಗೆ ರೂ.1,00,00,000/– (ರೂಪಾಯಿ ಒಂದು ಕೋಟಿ) ಅನುದಾನ ಮಂಜೂರು ಮಾಡಿದ್ದು, ಈ ಒಂದು ಕೋಟಿ ರೂಪಾಯಿ ಅನುದಾನವನ್ನು ಉಪಯೋಗಿಸಿಕೊಳ್ಳುವ ಸಂಬಂಧ ಸ್ಥಳದ ತುರ್ತು ಅವಶ್ಯಕತೆ ಇರುತ್ತದೆ ಎಂದು ಭಾರತ ಸರ್ಕಾರದ ಗ್ರಾಮೀಣ ಅಭಿವೃದ್ಧಿ ಇಲಾಖೆ ಇವರು ಹೊರಡಿಸಿರುವ ಗೈಡ್‌ಲೈನ್ಸ್‌ನಂತೆ ಅಗತ್ಯ ಜಮೀನನ್ನು ಉಚಿತವಾಗಿ ನೀಡಲು ಕೋರಲಾಗಿದೆ ಎಂಬುದಾಗಿ ವರದಿ ಮಾಡುತ್ತಾ ಸದರಿ ಸಂಸ್ಥೆಗೆ 1–00 ಎಕರೆ ಜಮೀನನ್ನು ಉಚಿತವಾಗಿ ಮಂಜೂರು ಮಾಡಲು ಕೋರಿದ್ದರು.

2. ರೂಡ್‌ಸೆಟಿ ಸಂಸ್ಥೆಗಳು ಸೊಸೈಟಿ ಆಕ್ಟ್ ಅಡಿಯಲ್ಲಿ ನೋಂದಾಯಿಸಲ್ಪಟ್ಟ ಸೊಸೈಟಿಗಳಾಗಿದ್ದು, ಕೋರಿರುವ ಜಮೀನು ನಗರ ವ್ಯಾಪ್ತಿಯಲ್ಲಿ ಬರುವ ಜಮೀನಾಗಿರುವುದರಿಂದ ಮತ್ತು ಭೂ ಮಂಜೂರಾತಿ ನಿಯಮಾನುಸಾರ ಉಚಿತವಾಗಿ ಮಂಜೂರು ಮಾಡಲು ಅವಕಾಶವಿಲ್ಲದಿರುವುದರಿಂದ ಬಳ್ಳಾರಿ ನಗರದ ಟಿ.ಎಸ್.ನಂ. 8 ವಾರ್ಡ್ ನಂ. 5, ಬ್ಲಾಕ್ ನಂ.1 ರಲ್ಲಿ ವಿಸ್ತೀರ್ಣ 1–00 ಎಕರೆ ಜಮೀನನ್ನು ಸಿಂಡಿಕೇಟ್ ಗ್ರಾಮೀಣ ಉದ್ಯಮಶೀಲತೆ ಅಭಿವೃದ್ಧಿ ಸಂಸ್ಥೆಗೆ ಕಟ್ಟಡ ನಿರ್ಮಾಣಕ್ಕಾಗಿ ಸದರಿ ಜಮೀನಿನ ಪ್ರಚಲಿತ ಮಾರುಕಟ್ಟೆ ದರದ ಶೇ. 10 ರಷ್ಟು ಗುತ್ತಿಗೆ ದರ ಹಾಗೂ ಪ್ರತಿ 2 ವರ್ಷಗಳಿಗೊಮ್ಮೆ ಶೇ. 10 ರಷ್ಟು ಗುತ್ತಿಗೆ ದರ ಹೆಚ್ಚಿಸುವ ಷರತ್ತು ವಿಧಿಸಿ 30 ವರ್ಷಗಳ ಅವಧಿಗೆ ಗುತ್ತಿಗೆ ನೀಡಲು ಮೇಲೆ ಓದಲಾದ (2)ರ ಸರ್ಕಾರದ ಪತ್ರದಲ್ಲಿ ಅನುಮತಿ ನೀಡಲಾಗಿತ್ತು.

3. ಮೇಲೆ ಓದಲಾದ (3)ರ ಪತ್ರದಲ್ಲಿ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯವರು ಸಿಂಡಿಕೇಟ್ ಗ್ರಾಮೀಣ ಉದ್ಯಮಶೀಲತೆ ಅಭಿವೃದ್ಧಿ ಸಂಸ್ಥೆಗೆ ಕಟ್ಟಡಕ್ಕಾಗಿ ಗುತ್ತಿಗೆ ದರ ವಿಧಿಸಿ ಮಂಜೂರು ಮಾಡಲಾಗಿರುವ ದರವನ್ನು ಪರಿಷ್ಕರಿಸಿ ಸದರಿ ಜಮೀನನ್ನು ವಾರ್ಷಿಕ ನಾಮಿನಲ್ ದರ ರೂ.100.00 ರೂಪಾಯಿಯನ್ನು ವಿಧಿಸಿ ಸಿಂಡಿಕೇಟ್ ಬ್ಯಾಂಕಿಗೆ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಹಾಗೂ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ರವರ ಪ್ರಸ್ತಾವನೆಯನ್ನು ಸರ್ಕಾರವು ಮರು ಪರಿಶೀಲಿಸಿ ಉಲ್ಲೇಖ (2)ರ ಸರ್ಕಾರಿ ಪತ್ರವನ್ನು ಹಿಂದಕ್ಕೆ ಪಡೆದು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 41 ಎಲ್‌ಜಿಎಲ್ 2008, ಬೆಂಗಳೂರು, ದಿನಾಂಕ 02ನೇ ಮೇ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆ, ಬಳ್ಳಾರಿ ನಗರದ ಟಿ.ಎಸ್.ನಂ. 8 ವಾರ್ಡ್ ನಂ. 5, ಬ್ಲಾಕ್ ನಂ.1 ರಲ್ಲಿನ 1–00 ಎಕರೆ ಜಮೀನನ್ನು ವಾರ್ಷಿಕ ನಾಮಮಾತ್ರ ದರ ರೂ.100.00 ವಿಧಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 19(1)(3)(ಬಿ) ರನ್ವಯ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಸಿಂಡಿಕೇಟ್ ಗ್ರಾಮೀಣ ಉದ್ಯಮಶೀಲತೆ ಅಭಿವೃದ್ಧಿ ಸಂಸ್ಥೆ ಕಟ್ಟಡ ನಿರ್ಮಾಣಕ್ಕಾಗಿ ಮಂಜೂರು ಮಾಡಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 277 ವೆಚ್ಚ–7/2010, ದಿನಾಂಕ : 12–04–2011 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಜೆ. ಲಕ್ಷ್ಮೀನಾರಾಯಣ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–3)

ಪಿ.ಆರ್. 1336

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎಸ್.ಆರ್. ಕೃಷ್ಣಯ್ಯ, ತಹಶೀಲ್ದಾರ್ ಅವರ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸಿ ಸ್ಥಳ ನಿಯುಕ್ತಿಗೊಳಿಸುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 12 ಎಟಿಎಸ್ 2011, ಬೆಂಗಳೂರು, ದಿನಾಂಕ 09ನೇ ಮೇ 2011**

ಸರ್ಕಾರದ ಸಮ ಸಂಖ್ಯೆಯ ದಿನಾಂಕ 7–3–2011 ರ ಆದೇಶದ ಪ್ರಕಾರ ಅಮಾನತ್ತಿನಲ್ಲಿರುವ ಶ್ರೀ ಎಸ್.ಆರ್. ಕೃಷ್ಣಯ್ಯ, ತಹಶೀಲ್ದಾರ್ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು, ಈ ಕೂಡಲೇ ಇವರ ಅಮಾನತ್ತು ತೆರವುಗೊಳಿಸಿ ಇವರನ್ನು ಖಾಲಿ ಇರುವ ತಹಶೀಲ್ದಾರ್, ಹೊಳೆನರಸೀಪುರ ತಾಲ್ಲೂಕು ಇಲ್ಲಿಗೆ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಾಲಕೃಷ್ಣಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 1337

**ಕಂದಾಯ ಸಚಿವಾಲಯ**

**ವಿಷಯ :** ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಮಹಾಂತಲಿಂಗಾಪುರ ಗ್ರಾಮದ ಸ.ನಂ. 47ರಲ್ಲಿ 110 ಎಕರೆ ಜಮೀನನ್ನು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಇವರಿಗೆ ಹಾಗೂ 50 ಎಕರೆ ಜಮೀನನ್ನು ಮ್ಯಾನೇಜ್‌ಮೆಂಟ್ ಡೆವಲಪ್‌ಮೆಂಟ್ ಇನ್‌ಸ್ಟಿಟ್ಯೂಟ್ ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ನಿರ್ದೇಶಕರು, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಇವರ ಪತ್ರ ದಿನಾಂಕ 01-07-2010 ಮತ್ತು 14-08-2010.
2. ಮ್ಯಾನೇಜ್‌ಮೆಂಟ್ ಡೆವಲಪ್‌ಮೆಂಟ್ ಇನ್‌ಸ್ಟಿಟ್ಯೂಟ್ ಇವರ ಪತ್ರದ ದಿನಾಂಕ 04-01-2011 ಮತ್ತು 11-01-2011.
3. ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಇವರ ಪತ್ರ ಸಂಖ್ಯೆ : ಎಲ್‌ಎನ್‌ಡಿ (ಎಸ್) ಸಿಆರ್ 31/10-11, ದಿನಾಂಕ 27-08-2010.

ನಿರ್ದೇಶಕರು, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಇವರು ಮೇಲೆ ಓದಲಾದ ಕ್ರಮಸಂಖ್ಯೆ (1)ರ ದಿನಾಂಕ 01-07-2010 ಮತ್ತು 14-08-2010ರ ಪತ್ರದಲ್ಲಿ 1973ನೇ ಸಾಲಿನಿಂದ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಕ್ಯಾಂಪಸ್ಸನ್ನು ನಡೆಸುತ್ತಿದ್ದು, ಸದರಿ ಸಂಸ್ಥೆಯ ಯೋಜನೆಗಳನ್ನು ವಿಸ್ತರಿಸಲು ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಮಹಾಂತಲಿಂಗಾಪುರ ಗ್ರಾಮದ ಸ.ನಂ. 47ರಲ್ಲಿ 110 ಎಕರೆ ಜಮೀನನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

2. ಅದೇ ರೀತಿ ಮ್ಯಾನೇಜ್‌ಮೆಂಟ್ ಡೆವಲಪ್‌ಮೆಂಟ್ ಇನ್‌ಸ್ಟಿಟ್ಯೂಟ್ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ 04-01-2011 ಮತ್ತು 11-01-2011 ರಲ್ಲಿ ಬೆಂಗಳೂರಿನಲ್ಲಿ ಮ್ಯಾನೇಜ್‌ಮೆಂಟ್ ಡೆವಲಪ್‌ಮೆಂಟ್ ಇನ್‌ಸ್ಟಿಟ್ಯೂಟ್ ಸ್ಥಾಪಿಸುವ ಸಲುವಾಗಿ 50 ಎಕರೆ ಜಮೀನನ್ನು ಮಂಜೂರು ಮಾಡಲು ಕೋರಿರುತ್ತಾರೆ.

3. ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ 27-08-2010ರ ಪತ್ರದಲ್ಲಿ ಸಲ್ಲಿಸಿದ ವರದಿಯನ್ವಯ, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಮಹಾಂತಲಿಂಗಾಪುರ ಗ್ರಾಮದ ಸ.ನಂ. 47ರ ಜಮೀನು ಸರ್ಕಾರಿ ಗೋಮಾಳ ಜಮೀನಾಗಿದ್ದು, ಒಟ್ಟು ವಿಸ್ತೀರ್ಣ 743.21 ಎಕರೆ ಇದ್ದು, ಈ ಪೈಕಿ 493.21 ಎಕರೆ ಜಮೀನು ಒತ್ತುವರಿಯಾಗಿರುವುದಾಗಿ, 20.00 ಎಕರೆ ಜಮೀನು ಸಾರ್ವಜನಿಕರಿಗೆ ಮಂಜೂರಾಗಿದ್ದು, 13.04 ಎಕರೆ ಜಮೀನಿನಲ್ಲಿ ಸಾರ್ವಜನಿಕ ರಸ್ತೆ ಮತ್ತು ಊರು ಇರುತ್ತದೆಂದು ಉಳಿದ 210.35 ಎಕರೆ ಜಮೀನು ಖುಲ್ಲಾ ಇದ್ದು, ಈ ಪೈಕಿ 20 ಎಕರೆ ಜಮೀನು ಬಿ.ಎಂ.ಟಿ.ಸಿ. ರವರಿಗೆ ಮಂಜೂರಾಗಿರುತ್ತದೆ. ಇದರಲ್ಲಿ ಉಳಿದ ವಿಸ್ತೀರ್ಣ 190.35 ಎಕರೆ ಜಮೀನು ಗುಟ್ಟ, ಹಳ್ಳ ಮತ್ತು ಬಂಡೆಗಳಿಂದ ಕೂಡಿರುವ ಜಮೀನಾಗಿದ್ದು, ಈ ಪೈಕಿ 110 ಎಕರೆ ಜಮೀನನ್ನು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಇವರಿಗೆ ಮಂಜೂರು ಮಾಡಲು ಪ್ರಸ್ತಾಪಿಸಲಾಗಿದೆ. ಈ ಜಮೀನು ವ್ಯವಸಾಯಕ್ಕೆ ಯೋಗ್ಯವಾಗಿರುವುದಿಲ್ಲ ಮತ್ತು ಬಿ.ಬಿ.ಎಂ.ಪಿ. ವ್ಯಾಪ್ತಿಯಿಂದ ಸುಮಾರು 22 ಕಿ.ಮೀ. ದೂರವಿರುತ್ತದೆ ಎಂದು ತಿಳಿಸಿರುತ್ತಾರೆ. ಇದರ ಮಾರುಕಟ್ಟೆ ಬೆಲೆ ಎಕರೆಯೊಂದಕ್ಕೆ ರೂ. 15 ಲಕ್ಷಗಳಾಗಿರುತ್ತದೆ ಎಂದು ವರದಿ ಮಾಡಿರುತ್ತಾರೆ. ಅಲ್ಲದೆ ಹಸಿರು ವಲಯಕ್ಕೆ ಸೇರಿದ್ದು, ಯಾವುದೇ ಭೂ ಸ್ವಾಧೀನ ಪ್ರಕರಣ ದಾಖಲಾಗಿರುವುದಿಲ್ಲ ಎಂದು ತಿಳಿಸಿರುತ್ತಾರೆ.

4. ಜಿಲ್ಲಾಧಿಕಾರಿಗಳ ವರದಿಯನ್ವಯ ಸ.ನಂ. 47ರಲ್ಲಿ 190.35 ಎಕರೆ ಜಮೀನು ಖಾಲಿ ಇದ್ದು, ಈ ಪೈಕಿ 110 ಎಕರೆ ಜಮೀನನ್ನು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಇವರಿಗೆ ಮಂಜೂರು ಮಾಡಲು ಪ್ರಸ್ತಾವಿಸಿರುವುದರಿಂದ ಇನ್ನು ಉಳಿದ ಜಮಿನಿನ ಪೈಕಿ 50 ಎಕರೆ ಜಮೀನನ್ನು ಮ್ಯಾನೇಜ್‌ಮೆಂಟ್ ಡೆವಲಪ್‌ಮೆಂಟ್ ಇನ್‌ಸ್ಟಿಟ್ಯೂಟ್ ಇವರಿಗೆ ಮಂಜೂರು ಮಾಡಲು ಪ್ರಸ್ತಾವಿಸಲಾಗಿದೆ.

5. ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಕೇಂದ್ರ ಸರ್ಕಾರದ ಸ್ವಾಯತ್ತ ಸಂಸ್ಥೆಯಾಗಿದ್ದು, ದಿನಾಂಕ 27-03-1972 ರಲ್ಲಿ ನೋಂದಣಿಯಾಗಿರುತ್ತದೆ. ಕಳೆದ 5 ವರ್ಷಗಳ ವಾರ್ಷಿಕ ವರದಿ ಮತ್ತು ಆಡಿಟ್ ವರದಿಗಳನ್ನು ಒದಗಿಸಿರುತ್ತದೆ. ಮ್ಯಾನೇಜ್‌ಮೆಂಟ್ ಡೆವಲಪ್‌ಮೆಂಟ್ ಇನ್‌ಸ್ಟಿಟ್ಯೂಟ್ ಸಹ ಕೇಂದ್ರ ಸರ್ಕಾರದ ಸ್ವಾಯತ್ತ ಸಂಸ್ಥೆಯಾಗಿದ್ದು, ದಿನಾಂಕ 17-05-1972 ರಲ್ಲಿ ನೋಂದಣಿಯಾಗಿರುತ್ತದೆ. ಸದರಿ ಸಂಸ್ಥೆಯು ಕಳೆದ 5 ವರ್ಷಗಳ ವಾರ್ಷಿಕ ವರದಿ ಮತ್ತು ಆಡಿಟ್ ವರದಿಗಳನ್ನು ಒದಗಿಸಿರುತ್ತಾರೆ.

6. ಮೇಲ್ಕಂಡ ಎರಡೂ ಸಂಸ್ಥೆಗಳು ಭಾರತ ಸರ್ಕಾರದ ಸ್ವಾಯತ್ತ ಸಂಸ್ಥೆಗಳಾಗಿರುವುದರಿಂದ ಉನ್ನತ ಮಟ್ಟದ ವ್ಯಾಸಂಗ ನಡೆಸುವ ಉದ್ದೇಶ ಹೊಂದಿರುವುದರಿಂದ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19(1)ರನ್ವಯ ಈ ಎರಡೂ ಸಂಸ್ಥೆಗಳಿಗೆ ಗುತ್ತಿಗೆ ಆಧಾರದ ಮೇಲೆ ಜಮೀನು ಮಂಜೂರು ಮಾಡಲು ನಿರ್ಣಯಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 538 ಎಲ್‌ಜಿಬಿ 2010, ಬೆಂಗಳೂರು, ದಿನಾಂಕ 11ನೇ ಮೇ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಮಹಾಂತಲಿಂಗಾಪುರ ಗ್ರಾಮದ ಸ.ನಂ. 47ರಲ್ಲಿ 110 ಎಕರೆ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19(1)ರನ್ವಯ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಸಂಸ್ಥೆಗೆ ವಾರ್ಷಿಕ ಗುತ್ತಿಗೆ ರೂ. 5 ಲಕ್ಷಗಳನ್ನು ವಿಧಿಸಿ ಹಾಗೂ 50 ಎಕರೆ ಜಮೀನನ್ನು ಮ್ಯಾನೇಜ್‌ಮೆಂಟ್ ಡೆವಲಪ್‌ಮೆಂಟ್ ಇನ್‌ಸ್ಟಿಟ್ಯೂಟ್ ಇವರಿಗೆ ವಾರ್ಷಿಕ ಗುತ್ತಿಗೆ ರೂ.2.50 ಲಕ್ಷಗಳನ್ನು ವಿಧಿಸಿ ಶೈಕ್ಷಣಿಕ ಉದ್ದೇಶಕ್ಕಾಗಿ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ಸರ್ಕಾರವು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 123 ವೆಚ್ಚ–7/2011, ದಿನಾಂಕ : 04–03–2011 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಇ. ಈಶ್ವರ ನಾಯಕ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ.ಮಂ.)

ಪಿ.ಆರ್. 1338

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಅಫಜಲಪೂರ ತಾಲ್ಲೂಕಿನ ಅಫಜಲಪೂರ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ/(ಉ)ವ/ಬಿಜಾ/ಭೂಸ್ವಾಪ್ರ/2008–09/4751, ದಿನಾಂಕ 27–08–2008.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ, ಅಫಜಲಪೂರ ತಾಲ್ಲೂಕಿನ ಅಫಜಲಪೂರ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಅಫಜಲಪೂರ ಗ್ರಾಮದ ಜಮೀನುಗಳಿಗೆ ನ್ಯಾಯಾಲಯದ ಆದೇಶಾನುಸಾರ ಪರಿಹಾರ ಪಾವತಿಸಲು ರೂ. 9,65,400–00ಗಳ ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ ವಲಯ) ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ 27–08–2008ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 08–02–1990ರ ಪ್ರಕಾರ ಭೂಸ್ವಾಧೀನಕ್ಕೆ ಒಳಪಟ್ಟ ಅಫಜಲಪೂರ ಗ್ರಾಮದ ಸರ್ವೆ ನಂ. 55/4ರ 0–35 ಎಕರೆ ಹಾಗೂ ಸರ್ವೆ ನಂ.: 42/1ರ 3–20 ಎಕರೆ ಜಮೀನಿನ ಭೂಮಾಲೀಕರು ಐತೀರ್ಪಿನಂತೆ ಪರಿಹಾರ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗುಲ್ಬರ್ಗಾ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ದಲ್ಲಿ ಸಲ್ಲಿಸಿರುವ ಎಲ್.ಎ.ಸಿ. ಸಂಖ್ಯೆ: 942/97 ಮತ್ತು 338/94ರಲ್ಲಿ ನ್ಯಾಯಾಲಯವು ದಿನಾಂಕ 28–10–1999 ರಂದು ನೀಡಿರುವ ಆದೇಶದಲ್ಲಿ ಈ ಜಮೀನುಗಳ ಮಾರುಕಟ್ಟೆ ಬೆಲೆಯನ್ನು ಪ್ರತಿ ಎಕರೆಗೆ ರೂ. 20,000–00 ಗಳಿಗೆ ನಿಗದಿಪಡಿಸಿದೆ. ಎಲ್.ಎ.ಸಿ. 942/97 ಆದೇಶದ ವಿರುದ್ಧ ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಜಿಲ್ಲಾ ನ್ಯಾಯಾಲಯ, ಗುಲ್ಬರ್ಗ ಇಲ್ಲಿ ಸಲ್ಲಿಸಿರುವ ಎಲ್.ಎ.ಸಿ.ಎ. 37/2000ನ್ನು ಪುರಸ್ಕರಿಸಿ ಪರಿಹಾರ ಮೊತ್ತವನ್ನು ರೂ. 50,000–00ಗಳಿಗೆ ಹೆಚ್ಚಿಸಿದ್ದು ಎಲ್.ಎ.ಸಿ. ಸಂಖ್ಯೆ: 838/94ರ ಆದೇಶದ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ ಎಂ.ಎಫ್.ಎ. ಯನ್ನು ಪರಿಶೀಲಿಸಿ ದಿನಾಂಕ 30–07–2001 ರಂದು ನೀಡಿರುವ ಆದೇಶದಲ್ಲಿ ಎಲ್.ಎ.ಸಿ. ಸಂಖ್ಯೆ: 838/94ರಲ್ಲಿ ನೀಡಿದ ಆದೇಶವನ್ನು ತಿರಸ್ಕರಿಸಿದೆ.

ಮೇಲ್ಕಂಡ ಆದೇಶಗಳ ವಿರುದ್ಧ ಮೇಲ್ಮನವಿ ಸಲ್ಲಿಸಲು ಇವು ಅರ್ಹ ಪ್ರಕರಣವಲ್ಲವೆಂದು ಕಂದಾಯ ಇಲಾಖೆಯ ಕಾನೂನು ಕೋಶವು ತಿಳಿಸಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 110 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ : 20–05–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ, ಗುಲ್ಬರ್ಗಾ ಜಿಲ್ಲೆ, ಅಫಜಲಪೂರ ತಾಲ್ಲೂಕಿನ ಅಫಜಲಪೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಅಫ್‌ಜಲ್‌ಪುರ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಸಂಖ್ಯೆ: 947/99 ಮತ್ತು 838/94ರಲ್ಲಿ ನೀಡಿರುವ ಆದೇಶದಂತೆ ಪರಿಹಾರ ರೂ. 9,65,400–00 (ಒಂಭತ್ತು ಲಕ್ಷದ ಅರವತ್ತೈದು ಸಾವಿರದ ನಾಲ್ಕುನೂರು ರೂಪಾಯಿಗಳು ಮಾತ್ರ) ಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ನೀಡಲು ಸರ್ಕಾರವು ಅನುಮೋದನೆ ನೀಡಿದೆ.

1) ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2) ಹೆಚ್ಚುವರಿ ಪರಿಹಾರ ಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3) ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–132–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ–ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 9,65,400–00ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಸಿ 2010, ದಿನಾಂಕ 20–10–2010ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಗೋಪಾಲ್**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1384